# ಕನ್ನಡ ಸಾಹಿತ್ಯ ಚಿತ್ರಗಳು

## ಮೊದಲನೆಯ ಸಾಲು

( ಕಥೆಗಳು )

ಎಲ್. ಗುಂಡಪ್ಪ, ಎಂ.ಎ.

ಪ್ರಕಾಶಕರು :

ಎಸ್. ಎಸ್. ಎನ್. ಬುಕ್ ಡಿಪೋ,

ಸಿಟಿ ಮಾರ್ಕೆಟ್, ಬೆಂಗಳೂರು ಸಿಟಿ

ಸುಲಿದ ಬಾಳೆಯ ಹಣ್ಣಿನಂದದಿ
ಕಳಿದ ಸಿಗುರಿನ ಕಬ್ಬಿನಂದದಿ
ಅಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ಪ
ಲಲಿತವಹ ಕನ್ನಡದ ನುಡಿಯಲಿ
ತಿಳಿದು ತನ್ನೊಳು ತನ್ನ ಮುಕ್ತಿಯ
ಗಳಿಸಿಕೊಂಡರೆ ಸಾಲದೇ ?

– ಅನುಭವಾಮೃತ

# ಅರಿಕೆ

ಮನಸ್ಸನ್ನು ನಲಿಸಿ ಹೃದಯವನ್ನು ಹಿಗ್ಗಿಸಿ ಬುದ್ಧಿಯನ್ನು ತಿದ್ದಿ ಬಾಳನ್ನು ಬೆಳಗಿಸಲು ಸಾಹಿತ್ಯ ಉತ್ತಮ ಸಾಧನ. ಸಾಹಿತ್ಯ ಪರಿಚಯದಿಂದ ದೊರಕುವ ಸಂಸ್ಕಾರ ಮಾನವನನ್ನು ಧನ್ಯನನ್ನಾಗಿ ಮಾಡುತ್ತದೆ. ಸಾಹಿತ್ಯಕ್ಕೆ ಶಾಶ್ವತವಾದ ಒಂದು ಬೆಲೆಯಿದೆ; ಶಕ್ತಿಯಿದೆ. ಕಾಲ ದೇಶ ಭೇದದಿಂದ ಅದಕ್ಕೆ ಚ್ಯುತಿಯಿಲ್ಲ. ಅದನ್ನು ಅರಿತು ಗುರುತಿಸಿ ಬಳಸಿಕೊಳ್ಳುವುದು ಸಾಹಿತ್ಯ ವ್ಯಾಸಂಗದ ಗುರಿ. ಜನದ ಕರ್ತವ್ಯ.

ನಾಡಿನ ಪುನರುಜ್ಜೀವನಸಾಧನೆಯಲ್ಲಿ ಸಾಹಿತ್ಯದ ಪಾತ್ರ ಕಿರಿದಲ್ಲ, ಬಹು ಹಿರಿದು. ಅದಕ್ಕೇ ಅಗ್ರಸ್ಥಾನವೆಂದರೂ ಸಲ್ಲುತ್ತದೆ. ಹೊಸಕಾಲದ ಸಾಹಿತ್ಯ ಹಲವು ಬಗೆಯಲ್ಲಿ ಹೊರಹೊಮ್ಮಿ ಹರಿಯುತ್ತಿದೆ. ಜನ ಇದನ್ನು ಸುಲಭವಾಗಿ ಅರಿಯಬಲ್ಲರು. ಆದರೆ ಹಳೆಯ ಸಾಹಿತ್ಯ ಬಹು ಜನಕ್ಕೆ ನಿಲುಕದು. ಈಗಿನ ಎಷ್ಟೋ ಮಂದಿಗೆ ಅದರಲ್ಲಿ ಏನಿದೆಯೆಂಬುದೇ ತಿಳಿಯದು. ಈ ಅಪರಿಚಯದಿಂದಾಗಿ ಹಳೆಯ ಸಾಹಿತ್ಯದಲ್ಲಿ ಹುರುಳಿಲ್ಲವೆಂಬ ಹಳಿವಿನ ಮಾತು ಅಲ್ಲಲ್ಲಿ, ಆಗಾಗ ಕೇಳಬರುತ್ತಿದೆ.

ಹಳೆಯ ಸಾಹಿತ್ಯ ನೆಲದೊಳಗೆ ಮರೆಯಾಗಿರುವ ಮರದ ಬೇರಿನಂತೆ. ಚಿಗುರು ಹೂವು ಹಣ್ಣುಗಳನ್ನು ಕಂಡುಂಡು ತಣಿಯುವವರು ಬೇರನ್ನು ಮರೆಯುವುದು ಸಹಜ; ಸರಿಯಲ್ಲ. ಹಳೆಯ ಸಾಹಿತ್ಯದ ಪರಿಚಯ ಅಭ್ಯಾಸಗಳಿಗೆ ಜನರ ಆಸೆಯೂ ಪ್ರಯತ್ನವೂ ಹೆಚ್ಚಬೇಕೆಂಬುದು ನಿಜ. ಅಭ್ಯಾಸಿಗಳಿಗೆ ತಕ್ಕ ಸಹಾಯ ಸಲಕರಣೆಗಳನ್ನು ಒದಗಿಸಿ ಕೊಡಬೇಕಾದ್ದು ಅಗತ್ಯವೆಂಬುದೂ ಅಷ್ಟೇ ನಿಜ. ಈಗ ನಾನು ಕೈಕೊಂಡಿರುವುದು ಅವರಿಗೆ ನೆರವು ಕೊಡುವ ಒಂದು ಪ್ರಯತ್ನ.

ಕನ್ನಡದ ಹಳೆಯ ಸಾಹಿತ್ಯರಾಶಿಯಿಂದ ಅದರ ನಾನಾಮುಖಗಳೂ ತೋರಿಬರುವಂತೆ ಸುಮಾರು ನೂರು ಚಿತ್ರಗಳನ್ನು ಆಯ್ದು ಐದಾರು ಸಾಲುಗಳಲ್ಲಿ ಅಳವಡಿಸಿ ಕೊಡಬೇಕೆಂಬುದು ನನ್ನ ಉದ್ದೇಶ.

ಕವಿಯ ನಿರೂಪಣ ಕ್ರಮವನ್ನನುಸರಿಸಿ ಸಾಧ್ಯವಾದ ಮಟ್ಟಿಗೂ ಅವನ ಮಾತುಗಳನ್ನೆ ಬಳಸಿಕೊಂಡು ಈಗಿನ ರೂಪದಲ್ಲಿ ಈಗಿನವರಿಗೆ ಅರ್ಥವಾಗುವಂತೆ ಬರೆಯುವುದು ನನ್ನ ರೀತಿ. ಮುಖ್ಯವಾಗಿ ವಿದ್ಯಾರ್ಥಿಗಳಿಗೂ, ಜೀವನಕ್ಕಾಗಿ ಹಲವು ವೃತ್ತಿಗಳಲ್ಲಿ ತೊಡಗಿ ಸಾಹಿತ್ಯಾಭ್ಯಾಸಕ್ಕೆ ಹೆಚ್ಚು ಬಿಡುವಿಲ್ಲದಿರುವ ಸಾಮಾನ್ಯ ವಿದ್ಯಾವಂತರಿಗೂ ಈ ಪ್ರಯತ್ನದಿಂದ ಸಹಾಯವಾಗಬಹುದೆಂದು ನಂಬಿದ್ದೇನೆ.

ಸರಳತೆಗಾಗಿ ಇಲ್ಲಿ ಉದಾಹರಿಸಿರುವ ಪದ್ಯಗಳಲ್ಲಿ 'ಱ'ಕಾರ 'ೞ' ಕಾರಗಳನ್ನು ಉಪಯೋಗಿಸಿಲ್ಲ. ಅವಕ್ಕೆ ಬದಲಾಗಿ 'ರ'ಕಾರ 'ಳ'ಕಾರ ಗಳನ್ನೆ ಬಳಸಿದೆ.

ಈ ಕೆಲಸ ಮಾಡಬೇಕೆಂದು ನಾಲ್ಕೈದು ವರ್ಷಗಳಿಂದಲೂ ಆಲೋಚಿಸುತ್ತಿದ್ದೆನಾದರೂ ಇಬ್ಬರು ಮಾನ್ಯ ಮಿತ್ರರ ಪ್ರೋತ್ಸಾಹದಿಂದ ಈಗ ಇದು ಕಾರ್ಯರೂಪಕ್ಕೆ ಬಂತು. ಶ್ರೀ ಎಂ. ವಿ. ಸೀತಾರಾಮಯ್ಯ ಎಂ.ಎ., ಅವರು ಒಳ್ಳೆಯ ಚಿತ್ರ ಬರೆದುಕೊಟ್ಟು ಪುಸ್ತಕದ ಅಂದವನ್ನು ಹೆಚ್ಚಿಸಿದ್ದಾರೆ. ಇವರಿಗೆ ವಂದನೆಗಳು.

ಬೆಂಗಳೂರು
೨೪-೩-೧೯೪೭

ಎಲ್. ಗುಂಡಪ್ಪ

ಎನಿತನೊರಲ್ದು ಪೇೞ್ವ ಕವಿಯೇವನ್-ಅವಂ ಪೆಸರಿಟ್ಟು ಮೆಚ್ಚ ಬ
ಲ್ಲನನರಸಲ್ಕೆವೇೞ್ಪುದವನಂ ಜಗದೊಳ್ ಪಡೆಯಲ್ಕೆ ಬಾರದಾ
ತನ ಮುಖದಿಂದಮಲ್ಲದದು ಸಲ್ಲದು ಕಟ್ಟಿಯುಮೇನೊ ಮಾಲೆಗಾ
ರನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೇ

— ಜನ್ನ

[ಎಷ್ಟು ಅಕ್ಕರೆಯಿಂದ ಹೇಳಿದರೆ ತಾನೆ ಕವಿ ಏನು ಮಾಡಿಯಾನು? ಅವನ ಕೃತಿಯ ಗುಣವನ್ನು ಗುರುತಿಸಿ ತಿಳಿದು ಮೆಚ್ಚಬಲ್ಲವನನ್ನು ಹುಡುಕಲೇ ಬೇಕು. ಲೋಕದಲ್ಲಿ ಅಂಥವನನ್ನು ಪಡೆಯುವುದು ಬಹು ಕಷ್ಟ. ಆತನ ಮುಖದಿಂದ ಬಂದಲ್ಲದೆ ಕವಿಕೃತಿಯ ಗುಣ ಗೊತ್ತಾಗುವುದಿಲ್ಲ; ಕೃತಿಗೆ ಸಾರ್ಥಕ್ಯ ಬರುವುದಿಲ್ಲ. ಮಾಲೆಗಾರ ಹೂವಿನ ಹೊಸ ಬಾಸಿಗವನ್ನು ಕಟ್ಟಿದರೆ ತಾನೆ ಏನು? ಮುಡಿಯುವ ಭೋಗಿಗಳಿಲ್ಲದಿದ್ದರೆ ಅದು ಹಾಗೆಯೆ ಬಾಡಿಹೋಗುವುದಿಲ್ಲವೆ?]

# ಪರಿವಿಡಿ

# ಕನ್ನಡ ಸಾಹಿತ್ಯ ಚಿತ್ರಗಳು

## ವಿದ್ಯುಚ್ಚೋರನೆಂಬ ಋಷಿಯ ಕಥೆ

ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ವಿದೇಹವೆಂಬುದು ನಾಡು. ಅಲ್ಲಿ ಮಿಥಿಳೆಯೆಂಬುದು ಪಟ್ಟಣ. ಅದನ್ನಾಳುವವನು ವಾಮರಥನೆಂಬ ಅರಸ. ಆತನ ಮಹಾದೇವಿ ಬಂಧುಮತಿಯೆಂಬವಳು. ಅವರು ಇಷ್ಟ ವಿಷಯ ಭೋಗಗಳನ್ನು ಅನುಭವಿಸುತ್ತ ಸುಖವಾಗಿದ್ದರು.

ಆ ಪಟ್ಟಣದಲ್ಲಿ ಯಮದಂಡನೆಂಬವನು ತಳಾರ. ಅಲ್ಲಿ ವಿದ್ಯುಚ್ಚೋರನೆಂಬೊಬ್ಬ ಕಳ್ಳ. ಆ ಕಳ್ಳನು ಬಗೆಬಗೆಯ ತಸ್ಕರಶಾಸ್ತ್ರಗಳಲ್ಲಿ ಬಹು ಕುಶಲನಾದವನು. ಪಟ್ಟಣದ ಬೆಲೆ ಬಾಳುವ ವಸ್ತುಗಳನ್ನು ಇರುಳೆಲ್ಲ ಕದಿಯುವನು. ಕದ್ದು, ಪಟ್ಟಣಕ್ಕೆ ಸ್ವಲ್ಪ ದೂರದಲ್ಲಿ ಒಂದು ಪರ್ವತವುಂಟು. ಅದರಲ್ಲಿ ದೊಡ್ಡದೊಂದು ಗುಹೆಯುಂಟು. ಅದರೊಳಗೆ ಕದ್ದ ವಸ್ತುಗಳನ್ನೆಲ್ಲ ಹೂಳಿಟ್ಟು, ಗುಹೆಯ ಬಾಗಿಲನ್ನು ದೊಡ್ಡದೊಂದು ಶಿಲೆಯಿಂದ ಮುಚ್ಚಿ ಬರುವನು. ಹಗಲೆಲ್ಲ ಹಾಳು ದೇಗುಲದಲ್ಲಿ ಅಂಜನ ಎಚ್ಚಿ ವೇಷ ಮರಸಿಕೊಂಡಿರುವನು: ಮೈಯೆಲ್ಲ ತೊನ್ನು; ಮುರುಟಿದ ಕೈಕಾಲುಗಳು; ಮೂಗು ಒಳಕ್ಕಿಳಿದು ರಸಿಗೆ ಸುರಿಯುವುದು; ನೊಣ ಮುಸುರಿಕೊಂಡು ತಿನ್ನುತ್ತಿರುವುವು; ನೋಡಿದವರೆಲ್ಲ ಹೇಸುವರು. ಹೀಗೆ ವಿಕಾರ ವೇಷದಿಂದ ಮನೆಮನೆಗೂ ಅಲೆದು ಭಿಕ್ಷೆ ಬೇಡುತ್ತ, ತಾನು ತೊನ್ನನೆಂಬುದನ್ನು ತೋರಿಸಿಕೊಳ್ಳುತ್ತಿರುವನು. ಹಗಲೆಲ್ಲ ಹೀಗಿದ್ದು ರಾತ್ರಿಯಾದ ಮೇಲೆ ತನ್ನ ಸ್ವಾಭಾವಿಕವಾದ ಮೊದಲಿನ ದಿವ್ಯ ರೂಪನ್ನು ಕೈಕೊಂಡು ಪಟ್ಟೆ ಬಟ್ಟೆಯನ್ನುಟ್ಟು ಗಂಧ ಹಚ್ಚಿ ಹೂವು ಮುಡಿದು ಕರ್ಪೂರಸೇರಿಸಿದ ತಾಂಬೂಲವನ್ನು ಮೆಲ್ಲುತ್ತ ಸೂಳೆಗೇರಿಗಳಲ್ಲಿ ಸುಳಿಯುವನು. ಹಣವನ್ನು ವೆಚ್ಚಮಾಡಿ ಇಷ್ಟವಾದ ಭೋಗವನ್ನನುಭವಿಸುವನು. ಯಾರೂ ಅರಿಯದಂತಿದ್ದು ಅಧಿಕಾರಿಗಳು, ಸಾಮಂತರು, ಸೂಳೆಯರು ಮೊದಲಾದವರ ಧನವನ್ನೆಲ್ಲ ಕದ್ದು ಗವಿ ಸೇರಿಸುವನು.

ವಾಮರಥನ ಮೂಲಪುರುಷನಾದ ಪದ್ಮರಥನಿಗೆ ಅಚ್ಯುತೇಂದ್ರನು ಮೆಚ್ಚಿ ಕೊಟ್ಟಿದ್ದ ಸರ್ವರುಜಾಪಹಾರವೆಂಬ ಒಂದು ಹಾರ ಸಂತತಿ ಕ್ರಮದಿಂದ ವಾಮರಥನಿಗೆ ಬಂದಿತ್ತು. ಅದನ್ನು ಆತನು ಅರಮನೆಯ ಏಳನೆಯ ಅಂತಸ್ತಿನಲ್ಲಿ ತನ್ನ ಮಲಗುವ ಕೋಣೆಯಲ್ಲಿ ಒಂದು ಪೆಟ್ಟಿಗೆಯಲ್ಲಿಟ್ಟಿರುವನು. ಎಲ್ಲ ಕಾಲದಲ್ಲೂ ಗಂಧ ಪುಷ್ಪ ದೀಪ ಧೂಪ ಅಕ್ಷತೆಗಳಿಂದ ಪೂಜಿಸಿ ನಮಸ್ಕಾರ ಮಾಡುತ್ತಿರುವನು. ವಿದ್ಯುಚ್ಚೋರನು ಕಣ್ಣಿಗೆ ಅಂಜನ ಎಚ್ಚಿಕೊಂಡು ಯಾರೂ ತನ್ನನ್ನು ಕಾಣದಂತಾಗಿರಲು ಅರಮನೆಯನ್ನು ಹೊಕ್ಕು ದೊರೆಯು ಮಲಗುವ ಕೋಣೆಗೆ ನುಗ್ಗಿ, ತಲೆದೆಸೆಯಲ್ಲಿ ಪೂಜೆ ಮಾಡಿದ್ದ ಪೆಟ್ಟಿಗೆಯನ್ನು ತೆರೆದು ಆ ಹಾರವನ್ನು ತೆಗೆದುಕೊಂಡು ಅರಮನೆಯಿಂದ ಹೊರಬಿದ್ದು ಹೋಗಿ ಊರ ಹೊರಗಿನ ಗುಹೆಯಲ್ಲಿ ಹೂಳಿಟ್ಟು, ಪಟ್ಟಣಕ್ಕೆ ಬಂದು ಮೊದಲಿನಂತೆಯೆ ತನ್ನ ರೂಪು ಮಾಡಿಕೊಂಡಿದ್ದನು.

ಇತ್ತ ಅರಸನು ನೇಸರು ಮೂಡಿದಾಗ ಹಾರವನ್ನು ಕಾಣದೆ, ಆಸ್ಥಾನ ಮಂಟಪದಲ್ಲಿ ಸಿಂಹಾಸದನ ಮೇಲೆ ಕೂತು ತಳಾರನಾದ ಯಮದಂಡನಿಗೆ ಹೇಳಿಕಳಿಸಿ ಕರಸಿದನು. ಕರಸಿ, '' ಎಲವೋ ಯಮದಂಡಾ, ಪಟ್ಟಣದ ಹಾರುವರ, ಹರದರ, ಸೂಳೆಯರ, ಒಕ್ಕಲಮಕ್ಕಳ ಒಡವೆಯನ್ನೆಲ್ಲ ಕದ್ದರೂ ವಿಚಾರಿಸದೆ ಸುಮ್ಮನಿದ್ದೀಯೆ. ಅಲ್ಲದೆ ನಮ್ಮ ನೆಚ್ಚಮನೆಯನ್ನೂ ಕಳ್ಳನು ಹೊಕ್ಕು ಪೆಟ್ಟಿಗೆ ತೆರೆದು ಅಚ್ಯುತೇಂದ್ರನಿತ್ತ ಕುಲಧನವಾದ ಹಾರವನ್ನು ತೆಗೆದುಕೊಂಡು ಹೋದನು. ಬೇಗ ಕಳ್ಳನನ್ನು ಗೊತ್ತುಮಾಡಿ ಹಾರವನ್ನು ತೆಗೆದುಕೊಂಡು ಬಾ. ಹಾಗೆ ತರದಿದ್ದರೆ ಕಳ್ಳನಿಗೆ ತಕ್ಕ ನಿಗ್ರಹವನ್ನು ನಿನಗೇ ಮಾಡುವೆನು '' ಎಂದನು.

ಕೇಳಿ ತಳಾರನು, " ದೇವಾ ನನಗೆ ಏಳು ದಿನ ಅವಕಾಶ ಕೊಡಬೇಕು. ಏಳು ದಿವಸದೊಳಗೆ ಕಳ್ಳನನ್ನು ಕಂಡುಹಿಡಿಯದೆ ಹೋದೆನಾದರೆ, ದೇವರು ನನ್ನನ್ನು ಮೆಚ್ಚಿದಂತೆ ಮಾಡಬಹುದು " ಎಂದನು. ದೊರೆ ಅದಕ್ಕೊಪ್ಪಿದನು.

ತಳಾರನು ಪಟ್ಟಣದಲ್ಲಿ ಸೂಳೆಗೇರಿಗಳಲ್ಲೂ ಅಂಗಡಿಗಳಲ್ಲೂ ಬಸದಿಗಳಲ್ಲೂ ವಿಹಾರಗಳಲ್ಲೂ ಕೇರಿಕೇರಿಗಳಲ್ಲೂ ಆರಾಮಗಳಲ್ಲೂ ದೇವಾಲಯಗಳಲ್ಲೂ ಪಟ್ಟಣದ ಹೊರಗೂ ಒಳಗೂ, ಅಕ್ಕಪಕ್ಕದ ಪಟ್ಟಣಗಳಲ್ಲಿಯೂ

ಆರು ದಿವಸದ ವರೆಗೂ ಎಡೆಬಿಡದೆ ಹುಡುಕಿದನು. ಕಳ್ಳನನ್ನು ಎಲ್ಲಿಯೂ ಕಾಣಲಿಲ್ಲ. ಏಳನೆಯ ದಿವಸ ಹಾಳು ದೇಗುಲವಲ್ಲಿದ್ದ ತೊನ್ನನು ಹೋಗುವಾಗ ಸ್ವಲ್ಪ ದೊಡ್ಡದಾದ ಒಂದು ಚಿಕ್ಕ ಹಳ್ಳವನ್ನು ದಾರಿಯಲ್ಲಿ ಕಂಡು ಅದನ್ನು *ವಿದ್ಯಾಧರ ಕರಣದಿಂದ ಹಾರಿ ಹೋದನು. ಯಮದಂಡನು ದೂರದಲ್ಲಿದ್ದು ಅದನ್ನು ಕಂಡನು. ಕಂಡು ಇವನೇ ಕಳ್ಳನೆಂದು ನಿಶ್ಚಯಿಸಿ ಹಿಡಿದುಕೊಂಡು ಅವನು ಹುಯ್ಯಲಿಡುತ್ತಿದ್ದರೂ ಬಿಡದೆ ಅವನನ್ನು ಅರಮನೆಗೆ ಎಳೆದುಕೊಂಡು ಹೋಗಿ, 'ಕಳ್ಳನನ್ನು ತಂದೆ' ಎಂದು ಅರಸನಿಗೆ ತೋರಿಸಿ, 'ಈತನೇ ಕಳ್ಳ'ನೆಂದು ಹೇಳಿದನು.

ಅದಕ್ಕೆ ತೊನ್ನನು, "ದೇವಾ, ನಾನು ಕಳ್ಳನಲ್ಲ. ಇದನ್ನು ಪಟ್ಟಣವೆಲ್ಲ ಬಲ್ಲದು. ಕಳ್ಳನನ್ನು ಕಂಡುಹಿಡಿಯಲಾರದೆ ತನ್ನ ಸಾವಿಗೆ ಅಂಜಿ, ಈ ಬಡ ಪರದೇಶಿಯನ್ನು, ಪಟ್ಟಣದಲ್ಲಿ ತಿರಿದುಂಡು ಬಾಳುವ ನನ್ನನ್ನು, ಹಿಡಿದುಕೊಂಡು ಬಂದು ಕೊಲ್ಲಿಸುತ್ತಾನೆ" ಎಂದನು. ತಳಾರನು ಕಳ್ಳರನ್ನು ಕಂಡು ಹಿಡಿಯುವ ಶಾಸ್ತ್ರಗಳಲ್ಲಿ ಬಹಳ ಕುಶಲನಾದವನು. ಆದ್ದರಿಂದ ಅವನು ದೊರೆಗೆ "ಇವನು ರೂಪ ಮರಸಿಕೊಂಡು ರಾತ್ರಿಹೊತ್ತು ಪಟ್ಟಣದಲ್ಲೆಲ್ಲ ಕದ್ದು ಹಗಲು ಈ ರೀತಿ ತೊನ್ನನಾಗಿರುತ್ತಾನೆ. ನೀವು ನಂಬದಿದ್ದರೆ ನಂಬುವಂತೆ ಮಾಡಿ ತೋರಿಸುತ್ತೇನೆ" ಎಂದನು. ಹಾಗೆಂದು ಪ್ರತಿಘುಟಿಕಾಂಜನಗಳನ್ನು ತೊನ್ನನ ಕಣ್ಣಿಗೆ ಎಚ್ಚಿದನು. ಕೂಡಲೆ ದಿವ್ಯವಾದ ನೊದಲಿನ ರೂಪುಂಟಾಯಿತು. ಆಗ ಕಳ್ಳನು, "ಇವನು ಮೋಸಗಾರ. ಇಂದ್ರಜಾಲಗಳನ್ನು ಬಲ್ಲವನಾದ್ದರಿಂದ ಎಲ್ಲಾ ರೂಪುಗಳನ್ನೂ ಮಾಡಬಲ್ಲ" ಎಂದು ವಾದಿಸಿದನು. ತಳಾರನು, "ಬೇರೆಯವರಿಗೂ ಮಾಡಿ ನಂಬಿಕೆ ತೋರಿಸುತ್ತೇನೆ" ಎಂದು ನುಡಿದನು. ಅರಸನ ಅಪ್ಪಣೆ ಪಡೆದು ಅರಸಿಯರ ಮತ್ತು ಸೂಳೆಯರ ಕಣ್ಣುಗಳಿಗೆ ಅಂಜನವನ್ನೆಚ್ಚಿದನು. ಅವರೆಲ್ಲ ತೊನ್ನೆಯರಾದರು. ಬಳಿಕ ಪ್ರತಿಘುಟಿಕಾಂಜನಗಳನ್ನೆಚ್ಚಲು ಅವರು ಸ್ವಾಭಾವಿಕವಾದ ತಮ್ಮ ರೂಪನ್ನು ಪಡೆದರು.

-ಅದನ್ನು ಕಂಡು ಅರಸನಿಗೆ ನಂಬಿಕೆಯಾಯಿತು. "ಇವನೇ ಕಳ್ಳ.

---

*ವಿದ್ಯಾಧರರ ಹಾಗೆ ಆಕಾಶದಲ್ಲಿ ಹೋಗುವ ಒಂದು ವಿದ್ಯೆ.

ಇವನನ್ನು ದಂಡಿಸು" ಎಂದು ಯಮದಂಡನಿಗೆ ಅಪ್ಪಣೆಮಾಡಿದನು. ಅವನು ಕಳ್ಳನನ್ನು ತನ್ನ ಜೊತೆಯಲ್ಲಿ ಮನೆಗೆ ಕರೆದುಕೊಂಡು ಹೋಗಿ, ಮಾಘಮಾಸದ ರಾತ್ರಿಯಲ್ಲಿ, ಅತಿ ಶೀತದಲ್ಲಿ ಘೋರವಾದ ಮೂವತ್ತೆರಡು ಬಗೆಯ ದಂಡನೆಗಳಿಂದ ಬಹು ದೀರ್ಘಕಾಲ ದಂಡಿಸಿದನು. ತೊನ್ನನು ಅವಷ್ಟನ್ನೂ ಸಹಿಸಿಕೊಂಡು, "ನಾನು ಕಳ್ಳನಲ್ಲ. ಅಯ್ಯೋ! ಬಲ್ಲಾಳ್ತನದಿಂದ ಈ ತಳಾರನು ನನ್ನನ್ನು ಕೊಲ್ಲುತ್ತಾನೆ" ಎಂದು ಕಿರಿಚಿ ಹುಯ್ಯಲಿಟ್ಟನು. ತಳಾರನಿಗೆ 'ಇವನು ಕಳ್ಳನಲ್ಲ' ಎಂಬ ಒಂದು ನಂಬಿಕೆಯಾಯಿತು.

ಬೆಳಗಾಗಲು ಅರಮನೆಗೆ ಹೋಗಿ ದೊರೆಯನ್ನು ಕಂಡು, "ದೇವಾ, ಮೂವತ್ತೆರಡು ಬಗೆಯ ಘೋರದಂಡನೆಗಳಿಂದಲೂ ದಂಡಿಸಿ ನೋಡಿದೆನು. ಇವನು ಕಳ್ಳನಲ್ಲ. ನನ್ನನ್ನು ದೇವರು ಮೆಚ್ಚಿದಂತೆ ಮಾಡಬಹುದು" ಎಂದು ಬಿನ್ನಯಿಸಿದನು. ಅರಸನು, "ಯಮದಂಡನನ್ನು ಶ್ಮಶಾನದಲ್ಲಿ ಶೂಲಕ್ಕೆ ಹಾಕಿ" ಎಂದು ಆಳುಗಳಿಗೆ ಅಪ್ಪಣೆ ಮಾಡಿದನು. ಅವರು ಆತನನ್ನು ಶ್ಮಶಾನಕ್ಕೆ ಎಳೆದುಕೊಂಡು ಹೋಗಿ ಶೂಲದ ಮೇಲೇರಿಸಲು ಸಿದ್ಧವಾದರು. ಅಷ್ಟರಲ್ಲಿ ಅವರೊಡನೆಯೇ ಹೋಗಿದ್ದ ತೊನ್ನನು ರೂಪನ್ನು ಮಾರ್ಪಡಿಸಿಕೊಂಡು ತನ್ನ ಸ್ವಾಭಾವಿಕವಾದ ವಿದ್ಯುಚ್ಚೋರನ ದಿವ್ಯ ರೂಪವನ್ನು ತಾಳಿದನು. ತಾಳಿ ಯಮದಂಡನನ್ನು ಶೂಲಕ್ಕೆ ಹಾಕುವುದಕ್ಕೆ ಬಿಡದೆ ಅಡ್ಡನಿಂತನು. ಅರಸನ ಕಾಪಿನಾಳುಗಳನ್ನು ಕುರಿತು, "ಎಲೆ ಅಣ್ಣಗಳಿರಾ, ನೀವು ಈತನನ್ನು ಕೊಂದಿರಿ. ಈತನು ಶೂಲದಲ್ಲಿ ಹಾಕಲ್ಪಟ್ಟವನಾಗಿ ಸತ್ತವನೇ" ಎಂದು ನುಡಿದನು.

ಬಳಿಕ ತಳಾರನನ್ನು ಮಾತಾಡಿಸಿದನು: "ಎಲಾ ಯಮದಂಡಾ, ನೀನೂ ನಾನೂ ಕಿರಿತನದಲ್ಲಿ ಒಬ್ಬ ಉಪಾಧ್ಯಾಯರ ಬಳಿಯಲ್ಲಿ ಓದುತ್ತಿದ್ದಾಗ ನಂದನವನದೊಳಗೆ ನಾನು ಮಾಡಿದ ಪ್ರತಿಜ್ಞೆಯನ್ನು ನೆನೆಪೆಯೋ? ಒಂದೂ ದೋಷವಿಲ್ಲದೆ ನಿನ್ನನ್ನು ಕೊಲ್ಲಿಸಿದೆನೋ, ಕೊಲ್ಲಿಸಲಿಲ್ಲವೋ? ಮಾಡಿದ ಪ್ರತಿಜ್ಞೆಯನ್ನು ನೆನೆಯುವೆಯೋ, ನೆನೆಯುವುದಿಲ್ಲವೋ?" ಎಂದನು. ಯಮದಂಡನು "ಚೆನ್ನಾಗಿ ನೆನೆದೆನೆ" ಎಂದನು. ವಿದ್ಯುಚ್ಚೋರನು, "ಮತ್ತೀಗ ನೀನೇನು ಸತ್ತೆಯೋ, ಸಾಯೆಯೋ; ಮತ್ತೇನೋ?" ಎಂದನು. ಆಗ ಯಮದಂಡನು "ದೇವಾ, ನೀನು ಗೆದ್ದೆ; ನಾನು ಸೋತೆ; ಸತ್ತೆ" ಎಂದನು.

ಹೀಗೆ ಅವರಿಬ್ಬರೂ ಒಬ್ಬರಿಗೊಬ್ಬರು ಆಡಿಕೊಳ್ಳುತ್ತಿದ್ದ ಮಾತುಗಳನ್ನು ಕಾವಲಿನವರೂ ಊರಜನರೂ ಕೇಳಿ ಚೋದ್ಯಪಟ್ಟು ಬೆರಗಾಗಿದ್ದರು.

ವಿದ್ಯುಚ್ಚೋರನು ಕಾಪಿನವರಿಗೆ ಹೀಗೆ ಹೇಳಿದನು: "ನನ್ನನ್ನೂ ಈತನನ್ನೂ ಅರಸನಲ್ಲಿಗೆ ಕರೆದುಕೊಂಡು ಹೋಗಿ. ಅರಸನ ಮುಂದೆ ನನಗೂ ಇವನಿಗೂ ಮಾತುಂಟು. ಅಲ್ಲಿ ಆ ಮಾತಾಡಿದ ಬಳಿಕ ಅರಸನು ಈತನನ್ನು ತನ್ನ ಮನಬಂದಂತೆ ಮಾಡಲಿ. 'ಎಂತಾದರೂ, ಕೊಲ್ಲ ಹೇಳಿದರೂ ಮೂರು ಸಲ ಬೆಸಗೊಂಡಲ್ಲದೆ ಕೊಲ್ಲಲಾಗದು' ಎಂದು ನೀತಿಶಾಸ್ತ್ರಗಳಲ್ಲಿ ಹೇಳಿದೆ. ಅದರಿಂದ ನಮ್ಮಿಬ್ಬರನ್ನೂ ಅರಮನೆಗೆ ಕರೆದುಕೊಂಡು ಹೋಗಿ ಅರಸನಿಗೆ ತೋರಿಸಿ" ಎನ್ನಲಾಗಿ, ಆ ಕಾಪಿನವರು ಇಬ್ಬರನ್ನೂ ಅರಸನ ಬಳಿಗೆ ಕರೆದುಕೊಂಡು ಹೋದರು. ಹೋಗಿ, "ದೇವಾ, ಈತನು ಯಮದಂಡನನ್ನು ಕೊಲ್ಲಬಿಡದೆ ತಡೆದನು" ಎಂದು ಬಿನ್ನಯಿಸಿ ವಿದ್ಯುಚ್ಚೋರನನ್ನು ತೋರಿಸಿದರು. "ನೀನೇಕೆ ತಡೆದೆ?" ಎಂದು ಅರಸನು ಕೇಳಲು, ವಿದ್ಯುಚ್ಚೋರನು ಹೇಳತೊಡಗಿದನು:

"ಯಮದಂಡನದೇನೂ ದೋಷವಿಲ್ಲ. ದೇವತಾ ರಕ್ಷಿತವಾದ ಸರ್ವರುಜಾಪಹಾರವೆಂಬ ನಿಮ್ಮ ಹಾರ ಮೊದಲಾಗಿ ಪಟ್ಟಣದ ಒಡವೆಗಳನ್ನೆಲ್ಲ ರಾತ್ರಿಹೊತ್ತು ಈ ರೂಪಿನಲ್ಲಿ ಕದ್ದು, ಹಗಲೆಲ್ಲ ತೊನ್ನನಾಗಿ ಹಾಳು ದೇಗುಲದಲ್ಲಿ ಇರುತ್ತಿದ್ದೆ. ಆದ್ದರಿಂದ ನನ್ನನ್ನು ಕೊಲ್ಲಿ. ಈತನಿಗೇನೂ ದೋಷವಿಲ್ಲ." ಹೀಗೆನ್ನಲು ಅರಸನು, "ಆ ಕದ್ದ ಒಡವೆಯನ್ನೆಲ್ಲ ಏನು ಮಾಡಿದೆ?" ಎಂದು ಕೇಳಿದನು. "ಅಷ್ಟೂ ಇದೆ. ಐದಾರು ಸಾವಿರ ದೀನಾರ ವೆಚ್ಚವಾಗಿದೆ. ಉಳಿದದ್ದೆಲ್ಲ ಅಚ್ಚಳಿಯದೆ ಇದೆ" ಎಂದನು. ದೊರೆ, "ಹಾಗಾದರೆ, ಹಾರವನ್ನು ತೆಗೆದುಕೊಂಡು ಬಾ. ಪಟ್ಟಣದವರಿಗೂ ಅವರವರ ಒಡವೆಗಳನ್ನಿಟ್ಟಿರುವ ಸ್ಥಳವನ್ನು ತೋರಿಸು" ಎಂದು ಅಪ್ಪಣೆ ಮಾಡಿ ಪಟ್ಟಣದ ಜನಗಳನ್ನೂ ಅವನೊಡನೆ ಕಳಿಸಿದನು.

ಅವರೆಲ್ಲ ಕಾಪಿನೊಡನೆ ಹೊರಟರು. ವಿದ್ಯುಚ್ಚೋರನು ಅವರೊಡನೆ ಹೋಗಿ ಗುಹೆಯ ಬಾಗಿಲಿಗೆ ಮುಚ್ಚಿದ್ದ ದೊಡ್ಡ ಶಿಲೆಯನ್ನು ತೆಗೆದುಹಾಕಿ ಒಳಹೊಕ್ಕು ಹಾರವನ್ನು ತೆಗೆದುಕೊಂಡು ಪಟ್ಟಣದ ಜನಕ್ಕೆಲ್ಲ, "ನಿಮ್ಮ ನಿಮ್ಮ ಒಡವೆಗಳನ್ನು ಹುಡುಕಿ ತೆಗೆದುಕೊಳ್ಳಿ. ಒಬ್ಬರದೊಬ್ಬರಿಗೆ ಪಲ್ಲಟಿಸ

ದಂತೆ ನೋಡಿಕೊಳ್ಳಿ” ಎಂದು ತೋರಿಸಿದನು. ಅವರೆಲ್ಲ ತಮ್ಮ ತಮ್ಮ ಒಡವೆಗಳನ್ನು ಹುಡುಕಿ ತೆಗೆದುಕೊಂಡರು.

ಆಮೇಲೆ ವಿದ್ಯುಚ್ಚೋರನು ಹಾರವನ್ನು ತೆಗೆದುಕೊಂಡು ಹೋಗಿ ದೊರೆಗೆ ಒಪ್ಪಿಸಿದನು. ಆಗ ಆತನು “ಮಾಘಮಾಸದ ರಾತ್ರಿಯಲ್ಲಿ, ನಾಲ್ಕು ಜಾವದಲ್ಲಿಯೂ ಘೋರವಾದ ಮೂವತ್ತೆರಡು ದಂಡನೆಗಳನ್ನು ಹೇಗೆ ಸೈರಿಸಿದೆ?” ಎಂದು ಕೇಳಿದನು. ಅದಕ್ಕೆ ವಿದ್ಯುಚ್ಚೋರನಿಂತೆಂದನು:

“ದೇವಾ, ಕಿರಿಯವನಾಗಿದ್ದಾಗ ಒಂದು ದಿವಸ ನನ್ನನ್ನು ಓದಿಸುವ ಓಜರೊಡನೆ ಸಹಸ್ರಕೂಟ ಚೈತ್ಯಾಲಯಕ್ಕೆ ನಾನೂ ಹೋಗಿದ್ದೆ. ಓಜರು ದೇವರನ್ನು ವಂದಿಸಹೋದರು. ಅವರು ಬರುವವರೆಗೂ ನಾನು ಚರಿತ್ರ ಪುರಾಣಗಳನ್ನು ವ್ಯಾಖ್ಯಾನ ಮಾಡುತ್ತಿದ್ದ ಶಿವಗುಪ್ತರೆಂಬ ಆಚಾರ್ಯರ ಹತ್ತಿರ ಕುಳಿತಿದ್ದು ಅವರ ವ್ಯಾಖ್ಯಾನವನ್ನು ಕೇಳುತ್ತಿದ್ದೆ. ಅವರು ಹೀಗೆ ಹೇಳುತ್ತಿದ್ದರು: ‘ವ್ರತ ಶೀಲ ಚಾರಿತ್ರ ಗುಣಗಳಿಲ್ಲದವರು, ಜೀವಗಳನ್ನು ಕೊಲ್ಲುವವರು, ಬೇಟೆಯಾಡುವವರು, ರಾಗ ದ್ವೇಷ ಲೋಭಗಳಿಂದ ಸುಳ್ಳಾಡುವವರು, ಜೀವಗಳಿಗೆ ಸಂತಾಪವನ್ನೂ ವಧೆಯನ್ನೂ ಮಾಡುವವರು, ಮದ್ಯ ಮಾಂಸಗಳನ್ನು ಸೇವಿಸುವವರು—ಇವರೇ ಮೊದಲಾದವರೆಲ್ಲ ನರಕಗಳಲ್ಲಿ ಹುಟ್ಟಿ ದುಃಖವನ್ನನುಭವಿಸುತ್ತಾರೆ’ ಎಂದು ಹೇಳಿ ಆ ನರಕ ದುಃಖಗಳನ್ನೆಲ್ಲ ವಿವರಿಸಿದರು. ಮುಂದುವರಿಸಿ, ‘ಮತ್ತೂ ದಾನ, ಪೂಜೆ, ಶೀಲ, ಉಪವಾಸ— ಎಂಬ ಈ ನಾಲ್ಕು ಬಗೆಯ ಶ್ರಾವಕ ಧರ್ಮಗಳನ್ನು ನಡಸುವವರೂ, ತಪಸ್ಸು ಮಾಡುವವರೂ, ಸ್ವರ್ಗ ಮೋಕ್ಷ ಸುಖಗಳನ್ನು ಪಡೆಯುತ್ತಾರೆ’ ಎಂದು ಹೇಳಿದರು. ಅದನ್ನು ಕೇಳಿ ಆ ಭಟಾರರ ಪಕ್ಕದಲ್ಲಿ ಶ್ರಾವಕ ಧರ್ಮಗಳನ್ನು ಕೈಕೊಂಡೆನು. ‘ಅರ್ಹಂತ ಪರಮ ದೇವರೆ ದೇವರು. ಕೊಲ್ಲದಿರುವುದೆ ಧರ್ಮ. ಅಂತರಂಗ ಬಹಿರಂಗಗಳಲ್ಲಿ ಯಾವ ಪರಿಗ್ರಹವೂ ಇಲ್ಲದಿರುವುದೇ ತಪಸ್ಸು’ ಎಂಬಿವೇ ಮೊದಲಾದ ತತ್ತ್ವಗಳನ್ನು ತಿಳಿದುಕೊಂಡೆನು; ಸಮ್ಯಕ್ತ್ವವನ್ನು ಕೈಕೊಂಡೆನು; ವ್ರತಗಳನ್ನು ತಾಳಿದೆನು. ಆಗ ಕೇಳಿದ್ದ ನರಕ ದುಃಖಗಳ ಶತಸಹಸ್ರಭಾಗಕ್ಕೂ ಇವು ಸಮವಲ್ಲವೆಂದು ಮನಸ್ಸಿನಲ್ಲಿ ಭಾವಿಸಿ ಈ ಮೂವತ್ತೆರಡು ದಂಡನೆಗಳನ್ನೂ ಸೈರಿಸಿಕೊಂಡೆನು” ಎಂದನು.

ಅದನ್ನು ಕೇಳಿ ಅರಸನು, “ನಿನ್ನನ್ನು ಮೆಚ್ಚಿದೆ. ಬೇಡಿಕೊ. ನೀನು ಬೇಡಿ

ದ್ದೆಲ್ಲವನ್ನೂ ಕೊಡುತ್ತೇನೆ" ಎಂದನು. ಎನ್ನಲಾಗಿ, "ಬೇರೆ ಏನನ್ನೂ ಒಲ್ಲೆ. ನನ್ನ ಕೆಳೆಯನಾದ ಯಮದಂಡನಿಗೆ ಕ್ಷಮೆದೋರಬೇಕು. ಇದೊಂದನ್ನೇ ನಾನು ಬೇಡುವುದು" ಎಂದು ವಿದ್ಯುಚ್ಚೋರನು ಕೇಳಿಕೊಂಡನು. ಅರಸನೂ ಮತ್ತೆ ಹೀಗೆಂದು ಬೆಸಗೊಂಡನು: "ಯಮದಂಡನು ನಿನಗೆ ಹೇಗೆ ಕೆಳೆಯನಾದನು? ನೀನು ಶ್ರಾವಕ ವ್ರತಗಳನ್ನು ಕೈಕೊಂಡೆಯಾದರೂ ಏಕೆ ಕದಿಯುತ್ತೀಯೆ?" ಹೀಗೆ ಬೆಸಗೊಳ್ಳಲಾಗಿ ಆತನು, "ಯಮದಂಡನು ನನಗೆ ಕೆಳೆಯನಾಗಿರುವ ಸಂಗತಿಯನ್ನೂ ನಿನ್ನ ಪಟ್ಟಣದ ಧನವನ್ನು ಕದ್ದದಕ್ಕೆ ಕಾರಣವನ್ನೂ ಹೇಳುತ್ತೇನೆ. ಕೇಳು, ಅರಸಾ" ಎಂದು ಹೇಳತೊಡಗಿದನು:

"ದಕ್ಷಿಣಾಪಥದಲ್ಲಿ ಅಭೀರನೆಂಬ ನಾಡು. ಅಲ್ಲಿ ವರ್ಣೆಯೆಂಬ ತೊರೆ. ಅದರ ದಡದಲ್ಲಿ ವೇಣಾತಟಕವೆಂಬ ಪಟ್ಟಣ. ಆ ಪಟ್ಟಣ ಬಹು ರಮ್ಯವಾಗಿ ಸ್ವರ್ಗವನ್ನೆ ಹೋಲುತ್ತಿರುವುದು. ಆದನ್ನಾಳುವವನು ಜಿತಶತ್ರುವೆಂಬರಸ. ಆತನ ಮಹಾದೇವಿ ವಿಜಯಮತಿಯೆಂಬವಳು. ಆ ಇಬ್ಬರಿಗೂ ಮಗ ನಾನು, ವಿದ್ಯುಚ್ಚೋರ. ಮತ್ತು ಅದೇ ಪಟ್ಟಣದಲ್ಲಿ ಯಮಪಾಶನೆಂಬವನು ತಳಾರ. ಆತನ ಹೆಂಡತಿ ನಿಜಗುಣದೇವತೆಯೆಂಬವಳು. ಆ ಇಬ್ಬರಿಗೂ ಮಗ ಈತ, ಯಮದಂಡನೆಂಬವನು. ನಾವಿಬ್ಬರೂ ಸಮಾನ ವಯಸ್ಸಿನವರು. ಐದಾರು ವರ್ಷದವರಾಗಿದ್ದಾಗ ಸಿದ್ಧಾರ್ಥನೆಂಬ ಉಪಾಧ್ಯಾಯರ ಬಳಿ ಇಬ್ಬರನ್ನೂ ಓದುವುದಕ್ಕೆ ಬಿಟ್ಟರು. ಏಳೆಂಟು ವರ್ಷದೊಳಗೆ ವ್ಯಾಕರಣ, ಛಂದಸ್ಸು, ಅಲಂಕಾರ, ಕಾವ್ಯ, ನಾಟಕ, ಚಾಣಾಕ್ಯ, ವೈದ್ಯ ಮೊದಲಾದ ಶಾಸ್ತ್ರಗಳನ್ನೆಲ್ಲ ಇಬ್ಬರೂ ಕಲಿತೆವು. ಬಳಿಕ ಈತ ತಳಾರನ ಮಗನಾದ್ದರಿಂದ ಕಳ್ಳರನ್ನು ಕಂಡುಹಿಡಿಯುವ ರೀತಿಯನ್ನು ತಿಳಿಸುವ 'ಸುರಖ'ವೆಂಬ ವಿದ್ಯೆಯನ್ನು ಕಲಿತನು. ನಾನು ಕದಿಯುವ ಉಪಾಯವನ್ನು ಹೇಳುವ 'ಕರಪಟಿ' ಶಾಸ್ತ್ರವನ್ನು ಕಲಿತೆನು. ಹೀಗೆ ನಾವಿಬ್ಬರೂ ಅನ್ಯೋನ್ಯ ಪ್ರೀತಿಯಿಂದ ಕಾಲಕಳೆಯುತ್ತಿದ್ದೆವು.

"ಒಂದು ದಿವಸ ಇಬ್ಬರೂ ವನಕ್ರೀಡೆಯಾಡುವುದಕ್ಕೆಂದು ಇಂದ್ರೋಪಮವೆಂಬ ವನಕ್ಕೆ ಹೋದೆವು. ಹಲವು ತೆರದ ವೃಕ್ಷಜಾತಿಗಳಿಂದ ಕಿಕ್ಕಿರಿದಿದ್ದ ಆ ವನದಲ್ಲಿ ಇಬ್ಬರೂ ಉಳಿಚೆಂಡಾಡುತ್ತಿದ್ದೆವು. ಆಗ, ಇವನು ಆಲೋಕನ ವಿದ್ಯೆಯನ್ನು ಕಲ್ತವನಾದ್ದರಿಂದ ಎಲ್ಲಿ ಉಳಿದರೂ ಇವನನ್ನು

ಕಾಣಲಾಗುತ್ತಿರಲಿಲ್ಲ. ಇವನನ್ನು ಬಹಳ ಹೊತ್ತು ಹುಡುಕಿ ಕಾಣದೆ ದೆಸೆಗೆಟ್ಟು ಚೀಸತ್ತಿನು. ಆಗ 'ಆಗಲಿ. ಮಗನೇ, ನೀನು ತಳಾರನಾದಾಗ ನಿನ್ನ ಕಾಪಿನಲ್ಲಿ ಕದ್ದು ನಿನ್ನನ್ನು ಕೊಲ್ಲಿಸದಿದ್ದರೆ ಏನಾಯಿತು!' ಎಂದು ನುಡಿದೆನು. ಅದಕ್ಕೆ ಈತನೂ ಹೀಗೆಂದನು: 'ಆಗಲಿ. ಮಗನೇ, ನೀನು ನಾನು ತಳಾರು ಮಾಡುವಾಗ ಕದ್ದರೆ ನಿನ್ನನ್ನು ಹಿಡಿದು ಕಟ್ಟಿ, ಕಳ್ಳರ ದಂಡನೆಯಿಂದ ದಂಡಿಸದಿದ್ದರೆ ಏನಾಯಿತು!' ಎಂದು ನುಡಿದನು. 'ಈ ಮಾತನ್ನು ಮರೆಯಬೇಡ' ಎಂದು ಇಬ್ಬರೂ ಒಬ್ಬರನ್ನೊಬ್ಬರು ಮೂದಲಿಸಿ ಪ್ರತಿಜ್ಞೆ ಮಾಡಿದೆವು.

"ಕೆಲವು ಕಾಲ ಕಳೆದ ಮೇಲೆ ನಮ್ಮ ತಂದೆ ನನಗೆ ಪಟ್ಟಕಟ್ಟಿ ತಪಸ್ಸಿಗೆ ಹೋದನು. ಈತನ ತಂದೆಯೂ ತನ್ನ ವಂಶಕ್ರಮದ ಅಧಿಕಾರವನ್ನು ಈತನಿಗೆ ಕೊಟ್ಟು ಅರಸನೊಡನೆ ತಪಸ್ಸಿಗೆ ನಡೆದನು. ನಾನು ರಾಜನಾದೆ; ಈತನು ತಳಾರನಾದನು. ಹೀಗೆ ಸುಖದಲ್ಲಿ ಇಬ್ಬರಿಗೂ ಕಾಲ ಕಳೆಯುತ್ತಿತ್ತು. ಮತ್ತೆ ಒಂದು ದಿವಸ ಈತ ತನ್ನ ಮನಸ್ಸಿನಲ್ಲಿ ಹೀಗೆಂದುಕೊಂಡನು:— 'ನಮ್ಮರಸ ಕಳ್ಳ; ನಾನು ಈ ಪಟ್ಟಣದಲ್ಲಿ ತಳಾರು ಮಾಡುತ್ತಿದ್ದೇನೆ. ಇದು ಕಾರ್ಯ ಒಳ್ಳೆಯುದಲ್ಲ' ಎಂದು ನನಗಂಜಿ ನಾಡು ಬಿಟ್ಟು ಬಂದು ನಿಮಗೆ ಆಳಾದನು. ನಾನೂ ಈತನನ್ನು ನಾನಾಳುವ ದೇಶದ ಎಂಟು ದಿಕ್ಕಿನ ಗ್ರಾಮ ನಗರಾದಿಗಳಲ್ಲೆಲ್ಲ ಹುಡುಕಿಸಿ ಕಾಣದೆ, ಪರಮಂಡಲಗಳಲ್ಲಿಯೂ ಹುಡುಕಿಸಿದೆನು. ಎಲ್ಲಿಯೂ ಕಾಣದಿರಲು ಇಲ್ಲಿಗೆ ಚರರನ್ನಟ್ಟಿದೆನು. ಅವರು ಹುಡುಕಿ ಬಂದು, 'ದೇವಾ. ಮಿಥಿಳೆಯೆಂಬ ಪಟ್ಟಣ. ಅದನ್ನಾಳುವವನು ಪಾಮರಥನೆಂಬರಸ. ಆತನಿಗೆ ಯಮದಂಡನು ಆಳಾಗಿ ಪಟ್ಟಣದ ಕಾಪು ಪಡೆದು ಸುಖವಾಗಿದ್ದಾನೆ' ಎಂದು ಹೇಳಿದರು.

"ಆ ಮಾತನ್ನು ಕೇಳಿ ನಾನು ಪುರುಷೋತ್ತಮನೆಂಬ ಮಂತ್ರಿಗೆ 'ಮಿಥಿಳಾ ಪಟ್ಟಣಕ್ಕೆ ಯಾರೂ ಅರಿಯದ ಹಾಗೆ ಹೋಗಿ ಯಮದಂಡನನ್ನು ಕರೆದುಕೊಂಡು ಬರುತ್ತೇನೆ' ಎಂದು ಹೇಳಿದೆನು. ಹೇಳಿ ವಜ್ರಸೇನನೆಂಬ ಹೆಗ್ಗಡೆಯನ್ನು ಕರಸಿ, 'ನಾನು ಒಂದು ಮದೆನಾರ್ತೆಗಾಗಿ ಹೋಗಿಬರುತ್ತೇನೆ. ನಾನು ಬರುವವರೆಗೂ ರಾಜ್ಯವನ್ನು ಪಾಲಿಸುತ್ತಿರು' ಎಂದು ಏರ್ಪಡಿಸಿ ಸಮಸ್ತ ರಾಜ್ಯಭಾರವನ್ನೂ ಒಪ್ಪಿಸಿಕೊಟ್ಟೆನು. ಬಳಿಕ ಅರ್ಧರಾತ್ರಿಯಲ್ಲಿ ಯಾರೂ ಅರಿಯದ ಹಾಗೆ ಒಬ್ಬನೇ ಹೊರಟು ಬಂದು ಈ ಪಟ್ಟಣವನ್ನು

ಹೊಕ್ಕು ಪ್ರತಿಜ್ಞೆ ಕಾರಣವಾಗಿ ಒಡವೆಗಳನ್ನು ಕದ್ದು ಈತನನ್ನು ಕೊಲ್ಲಿಸುವ ಹಾಗೆ ಮಾಡಿದೆನು. ಇದು ಕದ್ದದ್ದಕ್ಕೆ ಕಾರಣ. ಈತನೂ ಈ ರೀತಿಯಲ್ಲಿ ನನಗೆ ಮಿತ್ರ" ಎಂದು ಹೇಳಿ, ಮತ್ತೂ ಇಂತೆಂದನು: "ನಿಮ್ಮ ಸರ್ವ ರುಜಾಪಹಾರವೆಂಬ ಹಾರ ದೇವತಾಸಾನ್ನಿಧ್ಯವುಳ್ಳದ್ದು. ನಾನು ಸಮ್ಯಗ್ ದೃಷ್ಟಿಯನ್ನು ಪಡೆದವನಾದ್ದರಿಂದ ನನ್ನ ಕೈಗೆ ಬಂತು. ಉಳಿದ ಮಿಥ್ಯಾ ದೃಷ್ಟಿಗಳ ಕೈಗೆ ಬಾರದು" ಎಂದು ತನ್ನ ಮಾತು ಮುಗಿಸಿದನು.

ಅದನ್ನೆಲ್ಲ ಕೇಳಿ ಅರಸನು ಆ ಹಾರ ತಮಗೆ ಬಂದ ರೀತಿಯನ್ನು ನೆರವಿಗೆಲ್ಲ ವಿವರಿಸುತ್ತಿದ್ದನು. ಅಷ್ಟರಲ್ಲಿ ಇಬ್ಬರು ಹರಿವೊಂಟೆಯವರು ಓಲೆಯನ್ನು ತಂದು ಅರಮನೆಯ ಬಾಗಿಲಿನಲ್ಲಿ ನಿಂತು ಬಾಗಿಲವರಿಗೆ ಹೇಳಿದರು. ಅವರು ಬಂದು ತಮ್ಮರಸನಿಗೆ ತಿಳಿಸಿದರು. ಅರಸನ ಅನುಮತಿಯಿಂದ ಓಲೆಕಾರರು ಅರಮನೆಯನ್ನು ಹೊಕ್ಕು ಆಸ್ಥಾನದಲ್ಲಿದ್ದ ವಿದ್ಯುಚ್ಚೋರನನ್ನು ಕಂಡು ಅಡ್ಡ ಬಿದ್ದು ಆತನ ಮುಂದೆ ಓಲೆಯನ್ನಿಟ್ಟರು. ಸಂಧಿವಿಗ್ರಹಿ ಆ ಓಲೆಯನ್ನು ತೆಗೆದುಕೊಂಡು ಓದಿದನು. ಅದರಲ್ಲಿ, "ವಿದ್ಯುಚ್ಚೋರ ಪರಮಸ್ವಾಮಿಗೆ, ಮಂತ್ರಿ ಪುರುಷೋತ್ತಮನೂ ಹೆಗ್ಗಡೆ ವಜ್ರಸೇನನೂ ಸಾಷ್ಟಾಂಗವಾಗಿ ಎರಗಿ ಬಿನ್ನಯಿಸುವರು. ತಾವು ಹಲವು ದಿವಸ ಹೋಗಿದ್ದೀರಿ. ಬೇರೆ ಮನೆವಾರ್ತೆಯನ್ನೆಲ್ಲ ಮರೆತಿದ್ದೀರಿ. ತಾವಿಲ್ಲದೆ ರಾಜ್ಯವನ್ನು ಪಾಲಿಸುವವರು ಯಾರೂ ಇಲ್ಲ. ಈ ಓಲೆಯನ್ನು ಕಂಡೊಡನೆಯೇ ತಡೆಯದೆ ಹೊರಟು ಬರಬೇಕು" ಎಂದು ಬರೆದಿರುವುದನ್ನು ಓದಿ ತಿಳಿಸಿದನು. ಅದೆಲ್ಲವನ್ನೂ ಕೇಳಿ ವಾಮರಥನು, "ಈತ ಹೇಳಿದ್ದೂ ಓಲೆಯ ಮಾತೂ ಒಂದಾಯಿತು" ಎಂದು ಸಂದೇಹವಿಲ್ಲದೆ ನಂಬಿದನು.

ಬಳಿಕ ತನ್ನ ಸಿಂಹಾಸನಕ್ಕೆ ಸಮಾನವಾದ ಒಂದು ಪೀಠವನ್ನು ಆತನಿಗೆ ಹಾಕಿಸಿ ಕೂರಿಸಿದನು. "ನೀನು ನನ್ನ ತಂಗಿಯ ಮಗನಯ್ಯ, ಸೋದರಳಿಯನಯ್ಯ. ನನಗೆ ಶ್ರೀಮತಿ, ವಸುಮತಿ, ಗುಣಮತಿ, ಸುಲೋಚನೆ, ಸುಪ್ರಭೆ, ಸುಕಾಂತೆ, ಸುಶೀಲೆ, ಮನೋಹರಿ—ಎಂಬ ಎಂಟು ಮಂದಿ ಕನ್ಯೆಯರಿದ್ದಾರೆ. ಅವರು ಅತ್ಯಂತ ರೂಪಲಾವಣ್ಯವುಳ್ಳವರು; ನವಯೌವನೆಯರು; ಅರುವತ್ತು ನಾಲ್ಕು ಕಲೆಗಳಲ್ಲಿಯೂ ತುಂಬ ಕುಶಲೆಯರು. ಹಲವರರಸುಗಳು ಪಾವುಡಗಳನ್ನೂ ಓಲೆಗಳನ್ನೂ ಕಳಿಸಿ ಆ ಕೂಸುಗಳನ್ನು ಬೇಡುತ್ತಿದ್ದಾರೆ.

ಅವರಾರನ್ನೂ ಮೆಚ್ಚದೆ ಇಲ್ಲಿಯವರೆಗೂ ಅವರನ್ನು ಜೊಡನೆ ತಡೆದಿದ್ದೇನೆ. ಈ ಕನ್ಯಾರತ್ನಗಳಿಗೆ ನೀನೇ ಯೋಗ್ಯನಯ್ಯ. ಎಂಟು ಮಂದಿಯನ್ನೂ ನಿನಗೆ ಕೊಟ್ಟೆ. ಮದುವೆಯಾಗು" ಎಂದನು.

ವಿದ್ಯುಚ್ಚೋರನು, "ನಾನು ಒಬ್ಬಳನ್ನು ಮೆಚ್ಚಿ ಅವಳಲ್ಲಿ ಮನಸ್ಸಿಟ್ಟಿದ್ದೇನೆ. ಇವರನ್ನು ಕಟ್ಟಿಕೊಂಡೇನು ಮಾಡಲಿ?" ಎಂದನು. ಅರಸನು "ಯಾರನ್ನು ಮೆಚ್ಚಿದ್ದೀಯೆ?" ಎಂದು ಕೇಳಲು, "ಮುಕ್ತಿಶ್ರೀ ಎಂಬವಳು ಹೆಣ್ಣು. ಆಕೆಯಲ್ಲಿ ಮನಸ್ಸಿಟ್ಟಿದ್ದೇನೆ. ಆಕೆಯನ್ನೇ ಮದುವೆಯಾಗಬೇಕು" ಎಂದು ನಿರ್ಧಾರವಾಗಿ ನುಡಿದು, "ನನ್ನ ಕೆಳೆಯನನ್ನು ನನಗೆ ಒಪ್ಪಿಸಬೇಕು" ಎಂದು ಕೇಳಿಕೊಂಡನು. ಅರಸನು ಅದಕ್ಕೊಪ್ಪಿದನು. ವಿದ್ಯುಚ್ಚೋರನು ಯಮದಂಡನನ್ನೊಡಗೊಂಡು ಅರಸನನ್ನು ಬೀಳ್ಕೊಂಡನು. ಇಬ್ಬರೂ ಒಂಟೆಯನ್ನೇರಿ ತ್ವರಿತವಾಗಿ ಪ್ರಯಾಣಮಾಡುತ್ತ ಕೆಲವು ದಿವಸಗಳಲ್ಲಿ ವೇಣಾತಟವನ್ನು ಸೇರಿ ಹೇಳಿಕಳಿಸಿದರು.

ಪಟ್ಟಣವನ್ನು ಅಲಂಕರಿಸಿ ಮಂತ್ರಿ ಮಹತ್ತರ ಪರಿವಾರ ಸಾಮಂತ ಮಹಾಸಾಮಂತರೂ ಅಂತಃಪುರದವರೂ ಪಟ್ಟಣದ ಜನರೆಲ್ಲರೂ ಎದುರು ಬಂದು ಕಂಡು ನಮಸ್ಕರಿಸಿ ಸೇಸೆಯಿಕ್ಕಿದರು. ಬಳಿಕ ಇಬ್ಬರೂ ಪಟ್ಟದಾನೆಯನ್ನೇರಿ ಬೆಳ್ಗೊಡೆ ಮೊದಲಾದ ರಾಜ್ಯಚಿಹ್ನೆಗಳು ಮುಂದೆ ನಡೆಯಲು, ನಾನಾ ವಾದ್ಯಗಳು ಬಾಜಿಸುತ್ತಿರಲು ಅರಮನೆಯನ್ನು ಹೊಕ್ಕರು. ಮರುದಿವಸ ಆಸ್ಥಾನ ಮಂಟಪದಲ್ಲಿ ಸಿಂಹಾಸನದ ಮೇಲೆ ಕುಳಿತು, ಸಾಮಂತ ಮಹಾಸಾಮಂತರನ್ನೂ ಮಂತ್ರಿ ಪುರೋಹಿತವರ್ಗದವರನ್ನೂ ಅರಸಿಯರನ್ನೂ ಹೇಳಿಕಳಿಸಿ ಕರಸಿ, "ನಾನು ಈ ಸಂಸಾರದ ಭೋಗೋಪಭೋಗಗಳಿಗೆ ಹೇಸಿ ವಿರಕ್ತನಾಗಿ ತಪಸ್ಸು ಮಾಡಬಯಸಿದೆನು" ಎಂದು ತನ್ನ ನಿಶ್ಚಯವನ್ನು ತಿಳಿಸಿದನು.

ಅದನ್ನು ಕೇಳಿ ಅವರೆಲ್ಲರೂ ನೆರೆದು, "ಇನ್ನೂ ನಿನಗೆ ಏನು ಕಾಲವಾಗಿದೆ. ತಪಸ್ಸಿಗೆ ಹೋಗುವುದಕ್ಕೆ? ಇನ್ನೂ ನೀನು ಚಿಕ್ಕವನು; ನವಯೌವನದವನು. ಕೆಲವು ಕಾಲ ದೊರೆತನ ಮಾಡಿ ಆಮೇಲೆ ತಪಸ್ಸು ಮಾಡುವೆಯಂತೆ" ಎಂದರು. ಅದಕ್ಕೆ ಅರಸನು, "ಎಲ್ಲಿಯವರೆಗೆ ಬಾಳುವರೋ, ಯಾವಾಗ ಸಾಯುವರೋ ತಿಳಿಯುವುದು ಹೇಗೆ ಸಾಧ್ಯ?

ಮನುಷ್ಯರ ರೂಪ, ಯೌವನ, ತೇಜಸ್ಸು, ಸೌಭಾಗ್ಯ, ಆಯುಸ್ಸು, ಸಂಪತ್ತು, ನಲ್ಮೆ ಇವೇ ಮೊದಲಾದವೆಲ್ಲ ಅನಿತ್ಯಗಳು. ಯಾವಾಗ ಈ ಶರೀರವು ಸ್ವಸ್ಥವಾಗಿರುವುದೋ, ಯಾವಾಗ ಮುಪ್ಪು ಇನ್ನೂ ದೂರವಾಗಿರುವುದೋ, ಯಾವಾಗ ಇಂದ್ರಿಯಶಕ್ತಿ ಕುಗ್ಗದೆ ತಡೆಯಿಲ್ಲದ್ದಾಗಿರುವುದೋ, ಯಾವಾಗ ಆಯುಸ್ಸಿಗೆ ಇನ್ನೂ ಕ್ಷಯ ಪಟ್ಟದಿರುವುದೋ, ಆಗಲೆ ವಿದ್ವಾಂಸನಾದವನು ಆತ್ಮಶ್ರೇಯಸ್ಸಿಗೆ ಪ್ರಯತ್ನ ಮಾಡಬೇಕು. ಮನೆ ಹೊತ್ತಿ ಬೇಯುತ್ತಿರುವಾಗ ಬಾವಿ ತೋಡುವ ಪ್ರಯತ್ನ ಮಾಡುವುದು ಆವೆಂಥದು?'' ಎಂದು ಮೊದಲಾಗಿ ಶಾಸ್ತ್ರ ವಚನಗಳನ್ನು ಉದಾಹರಿಸಿ ನುಡಿದು, ತನ್ನ ನಿಶ್ಚಯವನ್ನು ದೃಢಪಡಿಸಿದನು. ಮತ್ತೆ ನೆರೆದ ಜನರನ್ನೆಲ್ಲ ಕುರಿತು, "ನಾನು ಅರಸ; ಇವರು ಆಳುಗಳು; ನನಗೇನು?—ಎಂದುಕೊಂಡು ಆರಿತು ಅರಿಯದೆ ನಾನು ಯಾರನ್ನಾದರೂ ಏನನ್ನಾದರೂ ಅಂದಿದ್ದು, ಆ ಸಂಕಟ ಮನಸ್ಸಿನಲ್ಲಿ ಕೊರೆಯುತ್ತಿದ್ದರೂ ಆ ಮಾತನ್ನು ಎಲ್ಲರೂ ಮರೆತುಬಿಡಿ" ಎಂದು ಕೇಳಿಕೊಂಡು ಕ್ಷಮೆಗೊಳಿಸಿದನು.

ಬಳಿಕ ವಿದ್ಯುದಂಗನೆಂಬ ತನ್ನ ಹಿರಿಯ ಮಗನಿಗೆ ಪಟ್ಟಕಟ್ಟಿ, ರಾಜ್ಯಾಭಿಷೇಕ ಮಾಡಿ "ಈತನನ್ನು ಹಿಡಿದು ನೀವೆಲ್ಲ ಸುಖವಾಗಿ ಬಾಳಿ" ಎಂದು ಕಳ್ಚಿಸಿದನು. ಯಮದಂಡನಿಗೆ ತಳಾರಿಕೆಯನ್ನು ಕೊಟ್ಟನು. ಆಮೇಲೆ ಮಂಗಳಾಲಂಕಾರಗಳನ್ನು ಧರಿಸಿ ಪಟ್ಟದಾನೆಯನ್ನೇರಿ, ಸತಿಯರು ಸಂಗಡ ಬರುತ್ತಿರಲು ಇಕ್ಕೆಲದಲ್ಲೂ ಚಾಮರವಿಕ್ಕಿಸಿಕೊಳ್ಳುತ್ತ ಸಮಸ್ತ ರಾಜ್ಯ ಚಿಹ್ನೆಗಳೊಡನೆ ಹೊರಟು, ವಂದಿ ಮಾಗಧ ಯಾಚಕಾದಿಗಳಿಗೂ, ದೀನ ಅನಾಥ ಅಂಧಕರಿಗೂ ತುಷ್ಟಿದಾನ ಕೊಡುತ್ತ ಸಹಸ್ರಕೂಟ ಚೈತ್ಯಾಲಯಕ್ಕೆ ಹೋದನು. ಅಲ್ಲಿ ಆನೆಯಿಂದಿಳಿದು ಬಸದಿಯನ್ನು ಮೂರು ಸಲ ಪ್ರದಕ್ಷಿಣೆ ಮಾಡಿ ದೇವರನ್ನು ವಂದಿಸಿದನು. ಬಳಿಕ ಗುಣಧರರೆಂಬ ಆಚಾರ್ಯರ ಬಳಿಗೈದಿ ಗುರುಭಕ್ತಿಯಿಂದ ವಂದಿಸಿ, ''ಭಟಾರಾ, ಸಂಸಾರವೆಂಬ ಸಮುದ್ರದಲ್ಲಿ ಮುಳುಗಿದ್ದೇನೆ. ಮುಳುಗಬಿಡದೆ ನನ್ನನ್ನು ಮೇಲೆತ್ತಿರಿ. ದೀಕ್ಷೆಯನ್ನು ಅನುಗ್ರಹಿಸಿರಿ" ಎಂದು ನುಡಿದು ಒಡಂಬಡಿಸಿ ದೀಕ್ಷೆ ಪಡೆದು ತಪೋನಿರತನಾದನು. ಸೌಂದರಿ ಮಹಾದೇವಿ ಮೊದಲಾದ ಆವನ ಅರಸಿಯರೂ ತಪಸ್ಸನ್ನು ಕೈಕೊಂಡು ಘೋರ ತಪಸ್ಸಿಗೆ ತೊಡಗಿದರು.

ಇತ್ತ ವಿದ್ಯುಚ್ಚೋರ ಮುನಿ ಹನ್ನೆರಡು ವರ್ಷಗಳವರೆಗೂ ಗುರುಗಳ ನ್ನಗಲದೆ ಸಮಸ್ತ ಆಗಮವೆಲ್ಲವನ್ನೂ ಕಲಿತರು. ಉಗ್ರೋಗ್ರ ತಪಸ್ಸುಮಾಡಿ ಕಡೆಗೆ ಆಚಾರ್ಯರಾದರು. ಐನೂರು ಮಂದಿ ಶಿಷ್ಯರೊಡನೆ ದೇಶವಿಹಾರ ಮಾಡುತ್ತಿದ್ದರು.

ಹೀಗೆ ವಿಹರಿಸುತ್ತಿದ್ದಾಗ ಒಮ್ಮೆ ಪೂರ್ವದೇಶದಲ್ಲಿ ಖಾಳಿಮಂಡಳವೆಂಬ ನಾಡಿನಲ್ಲಿ ತಾಮ್ರಲಿಪಿ ಯೆಂಬ ಪಟ್ಟಣದ ಹೊರವಳಯಕ್ಕೆ ಹೋದರು. ಅಲ್ಲಿ ವರಾಂಗಾಯಿಯೆಂಬ ಉಗ್ರದೇವತೆಗೆ ಆರಾರು ತಿಂಗಳಿಗೊಮ್ಮೆ ಜಾತ್ರೆಯಾಗು ವುದು. ಅಷ್ಟಮಿಯ ದಿನ ಜಾತ್ರೆ ನೆರೆಯಿತು. ದುರ್ಗಾದೇವತೆ ಋಷಿಗಳ ಬರವನ್ನು ದೂರದಲ್ಲಿ ಕಂಡು ಎದುರು ಹೋಗಿ "ನನ್ನ ಜಾತ್ರೆ ಮುಗಿಯುವ ವರೆಗೂ ನೀವು ಈ ಪಟ್ಟಣವನ್ನು ಪ್ರವೇಶಿಸಬೇಡಿ" ಎಂದು ತಡೆದಳು. ಶಿಷ್ಯರು "ನಮ್ಮನ್ನು ದೇವತೆ ಏನು ಮಾಡುತ್ತಾಳೆ? ಹೋಗೋಣ ಭಟಾರಾ!" ಎಂದು ಅವರನ್ನೊಡಗೊಂಡು ಪಟ್ಟಣವನ್ನು ಪ್ರವೇಶಿಸಿದರು.

ರಾತ್ರಿ ಪಟ್ಟಣದ ಪಶ್ಚಿಮ ದಿಕ್ಕಿನ ಕೋಟೆಯ ಹೊರಗಡೆ ವಿದ್ಯು ಚ್ಚೋರ ಭಟಾರರು ಪ್ರತಿಮಾ ಯೋಗದಲ್ಲಿ ನಿಂತರು. ದೇವತೆ ಮುನಿದು ಪಾರಿವಾಳದಷ್ಟು ದೊಡ್ಡವಾದ ಚಿಕ್ಕುಟಗಳನ್ನೂ ಸೊಳ್ಳೆಗಳನ್ನೂ ನಿರ್ಮಿಸಿ ಅವರ ಮೇಲೆ ಬಿಟ್ಟಳು. ಇರುಳು ನಾಲ್ಕು ಜಾವವೂ ಅವು ಮೈಯನ್ನೆಲ್ಲ ತಿನ್ನುತ್ತಿದ್ದು ನರಕ ವೇದನೆಗಿಂತ ಹೆಚ್ಚು ವೇದನೆಯುಂಟಾಗುವಂತೆ ಮಾಡಿ ದವು. ವಿದ್ಯುಚ್ಚೋರ ಮುನಿಗಳು ಅವೊಂದೂ ಇಲ್ಲವೇ ಇಲ್ಲವೋ ಎಂಬಂತೆ ಆ ವೇದನೆಗಳನ್ನೆಲ್ಲ ಸೈರಿಸಿದರು. ಸೈರಿಸಿ ಉತ್ತಮ ಧ್ಯಾನದಲ್ಲಿ ಮನಸ್ಸು ನಿಲ್ಲಿಸಿದರು. ಕಡೆಗೆ ಸಮಸ್ತ ಕರ್ಮಗಳನ್ನೂ ಕೆಡಿಸಿ ಮೋಕ್ಷಕ್ಕೆ ಹೋದರು.

ಭವ್ಯರು ವಿದ್ಯುಚ್ಚೋರ ಋಷಿಗಳನ್ನು ನೆನೆದು ದುಃಖಗಳನ್ನೆಲ್ಲ ಸೈರಿಸಿ ರತ್ನತ್ರಯಗಳನ್ನು ಸಾಧಿಸಿ ಸ್ವರ್ಗಮೋಕ್ಷ ಸುಖಗಳನ್ನು ಪಡೆಯಲಿ.

## ಹಿನ್ನುಡಿ

[ ಇದು "ವಡ್ಡಾರಾಧನೆ" ಎಂಬ ಹಳಗನ್ನಡ ಗ್ರಂಥದಲ್ಲಿನ ಒಂದು ಕಥೆ. ಆ ಗ್ರಂಥದಲ್ಲಿ ಇಂಥವೇ ಹತ್ತೊಂಬತ್ತು ಕಥೆಗಳಿವೆ. ಧರ್ಮಮಾರ್ಗದಲ್ಲಿ ನಡೆದು ತಪಸ್ಸು ಮಾಡುವಾಗ ಅನೇಕ ಬಗೆಯ ತೊಂದರೆಗಳಿಗೆ ಸಿಕ್ಕಿ, ಅವುಗಳನ್ನೆಲ್ಲ ಸಹಿಸಿ

ಮುಕ್ತರಾದ ದೊಡ್ಡವರ ಸಂಗತಿಗಳು ಆ ಎಲ್ಲ ಕಥೆಗಳಲ್ಲಿಯೂ ಬರುತ್ತವೆ. ಧರ್ಮ ಮತ್ತು ತಪಸ್ಸಿನ ವಿಷಯಗಳನ್ನು ಹೇಳುವ ಆ ಕಥೆಗಳಲ್ಲಿ ಜನರ ನಡವಳಿಕೆಗೆ ಸಂಬಂಧಪಟ್ಟ ಎಷ್ಟೋ ಸಂಗತಿಗಳು ಗೊತ್ತಾಗುತ್ತವೆ. ಎಲ್ಲ ಕಥೆಗಳೂ ಚೆನ್ನಾಗಿವೆ.

"ವಡ್ಡಾರಾಧನೆ" ಎಂದರೆ "ವೃದ್ಧಾರಾಧನೆ=ದೊಡ್ಡವರ ಪೂಜೆ" ಎಂದರ್ಥ. ಕಠಿನವಾದ ತಪಸ್ಸಿನಲ್ಲಿ ತೊಡಗಿದ ಜೈನ ಸನ್ಯಾಸಿಗಳು ಈ ಕಥೆಗಳಲ್ಲಿ ಹೇಳಿರುವ ಹಿರಿಯರು ಎಂಥೆಂಥ ಕಷ್ಟಗಳನ್ನು ಸಹಿಸಬೇಕಾಯಿತೆಂಬುದನ್ನು ಕೇಳುತ್ತ ತಾವೂ ಧೈರ್ಯದಿಂದ ಕಷ್ಟಗಳನ್ನು ತಾಳಿಕೊಳ್ಳುತ್ತಿದ್ದರಂತೆ. ಹಿರಿಯರ ಒಳ್ಳೆಯ ಗುಣಗಳನ್ನು ನೆನೆದು ಅವರು ನಡೆದಂತೆ ನಡೆಯುವುದೇ ನಾವು ಅವರಿಗೆ ಮಾಡುವ ನಿಜವಾದ ಪೂಜೆ. ಅದಕ್ಕಾಗಿಯೇ ಈ ಪುಸ್ತಕಕ್ಕೆ 'ವಡ್ಡಾರಾಧನೆ' ಎಂದು ಹೆಸರಿಟ್ಟಂತೆ ತೋರುತ್ತದೆ.

ನಮಗೆ ಇದುವರೆಗೆ ಸಿಕ್ಕಿರುವ ಕನ್ನಡ ಗ್ರಂಥಗಳಲ್ಲೆಲ್ಲ ಈ ವಡ್ಡಾರಾಧನೆಯೇ ಬಹು ಹಳೆಯದು. ಇದು ಕ್ರಿ.ಶ. ಐದು ಅಥವಾ ಆರನೆಯ ಶತಮಾನದಲ್ಲಿ ಬರೆದದ್ದಾಗಿರಬೇಕು. ಇನ್ನೂ ಹಿಂದಿನ ಕಾಲದ್ದಾಗಿದ್ದರೂ ಇರಬಹುದು. ಇದರ ಭಾಷೆ ಈಗ ನಾವು 'ಹಳಗನ್ನಡ' ಎನ್ನುತ್ತೇವಲ್ಲ ಅದಕ್ಕೂ ಹಳೆಯದು. ನಾಲ್ಕು ಐದನೆಯ ಶತಮಾನದ ಶಾಸನಗಳಲ್ಲಿ ಕೆಲವು ಕಡೆ ಇಂಥ ಭಾಷೆ ಕಂಡುಬರುತ್ತದೆ. ಇದನ್ನು 'ಪೂರ್ವದ ಹಳಗನ್ನಡ' ಎನ್ನಬಹುದು.

ಇದನ್ನು ಬರೆದವರು 'ರೇವಾಕೋಟ್ಯಾಚಾರ್ಯ'ರೆಂಬ ಜೈನಗುರುಗಳು.]

———:———

# ಭರತ-ಬಾಹುಬಲಿ

ಪರಮ ಜಿನೇಂದ್ರವಾಣಿಯೆ ಸರಸ್ವತಿ ಬೇರದು ಪೆಣ್ಣ ರೂಪಮಂ
ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳ್ವಪೂಜಿಪಾ
ದರಿಸುವ ಭವ್ಯಕೋಟಿಗೆ ನಿರಂತರ ಸೌಖ್ಯಮನೀವುದಾನದ
ಕ್ಕೆರೆದಪೆನಾ ಸರಸ್ವತಿಯೆ ಮಾಳ್ಕೆಮಗಿಲ್ಲಿಯೆ ವಾಗ್ವಿಳಾಸಮಂ

[ಸರ್ವಜ್ಞ ಶ್ರೇಷ್ಠನಾದ ಜಿನನ ಮಾತೇ ಸರಸ್ವತಿ. ಸರಸ್ವತಿಯೆಂದರೆ ಬೇರೆ ಒಂದು ಹೆಣ್ಣು ರೂಪವಲ್ಲ. ಜಿನನ ವಾಣಿಯನ್ನು ಮನಸ್ಸಿನಲ್ಲಿ ಭಾವಿಸಿಕೊಂಡು ಓದುವ, ಕೇಳುವ, ಪೂಜಿಸುವ ಮತ್ತು ಆದರಿಸುವ ಪುಣ್ಯವಂತರಿಗೆಲ್ಲ ಅದು ಶಾಶ್ವತವಾದ ಸುಖವನ್ನು ದಯಪಾಲಿಸುತ್ತದೆ. ನಾನು ಆ ಜಿನ ವಾಣಿಗೇ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಆ ಸರಸ್ವತಿಯು ನಮಗೆ ಮಾತಿನ ಸೊಗಸನ್ನು ಉಂಟು ಮಾಡಲಿ.]

## ಮೊದಲ ಮಾತು

[ಒಂದು ಕಾಲದಲ್ಲಿ ಎಲ್ಲಿ ನೋಡಿದರೂ ಧರ್ಮ ನೆಲಸಿರುವುದು, ಸುಖ ಸಮೃದ್ಧಿ ತುಂಬಿರುವುದು. ಬರುಬರುತ್ತ ಧರ್ಮವೂ ಸುಖವೂ ಇಳಿಮುಖವಾಗಿ ಅಧರ್ಮ ದುಃಖಗಳು ತಲೆಯೆತ್ತುವುವು. ಕಡೆಗೆ ಅಧರ್ಮವೇ ಮೇಲ್ಗೈಯಾಗಿ ಧರ್ಮ ನಶಿಸುವುದು. ಆಮೇಲೆ ಅಧರ್ಮಕ್ಕೆ ಇಳಿಗತಿಯೊದಗಿ ಧರ್ಮ ಬೆಳೆದು ತಾನೇ ತಾನಾಗುವುದು. ಹೀಗೆ ಲೋಕದಲ್ಲಿ ಸದಾ ನಡೆಯುತ್ತಲೇ ಇರುವುದು. ಧರ್ಮ ಇಳಿಮುಖವಾಗಿ ಕುಗ್ಗುವ ಕಾಲಕ್ಕೆ ಅವಸರ್ಪಿಣಿಯೆಂದೂ, ಮೇಲ್ಮುಖವಾಗಿ ಹೆಚ್ಚುವ ಕಾಲಕ್ಕೆ ಉತ್ಸರ್ಪಿಣಿಯೆಂದೂ ಹೆಸರು. ಅಧರ್ಮ ಹೆಚ್ಚಿದಾಗಲೆಲ್ಲ— ಪ್ರತಿ ಅವಸರ್ಪಿಣಿಯಲ್ಲೂ ಉತ್ಸರ್ಪಿಣಿಯಲ್ಲೂ — ಇಪ್ಪತ್ತುನಾಲ್ಕು ಮಂದಿ ತೀರ್ಥಂಕರರು ಅವತರಿಸಿ ಲೋಕಕ್ಕೆ ಧರ್ಮವನ್ನು ಬೋಧಿಸುವರು. ಸರ್ವಜ್ಞರೂ ಲೋಕೋದ್ಧಾರಕರೂ ಆದ ಇವರನ್ನೇ ದೇವರೆಂದು ಕರೆಯುವುದು.

ಈ ತೀರ್ಥಂಕರರು ಕೂಡ ನಮ್ಮೆಲ್ಲರಂತೆಯೇ ಸಾಧಾರಣರಾಗಿದ್ದವರು. ಅವರೂ ತಮ್ಮ ಕರ್ಮಕ್ಕೆ ತಕ್ಕಂತೆ ಸ್ವರ್ಗ ನರಕಗಳನ್ನು ಸೇರಿ ಸುಖದುಃಖಗಳನ್ನು ಅನುಭವಿಸುವರು ; ಮೃಗ, ಪಕ್ಷಿ, ಮನುಷ್ಯ ಮೊದಲಾದ ಜನ್ಮಗಳಲ್ಲಿ ಬಂದು ತೊಳಲುವರು. ಕ್ರಮಕ್ರಮವಾಗಿ ತಮ್ಮ ಕೆಟ್ಟ ಗುಣಗಳನ್ನೆಲ್ಲ ಕಳೆದುಕೊಂಡು ಒಳ್ಳೆಯ ಗುಣಗಳನ್ನೇ ಹೆಚ್ಚಿಸಿಕೊಳ್ಳುವರು. ಕಟ್ಟಕಡೆಗೆ ಹುಟ್ಟು ಸಾವುಗಳ

ಕಟ್ಟನ್ನು ಕಳಚಿಕೊಳ್ಳುವ ಮಾರ್ಗವನ್ನು ತಿಳಿದುಕೊಳ್ಳುವರು. ಇದರಿಂದ ಅವರಿಗೆ ತೀರ್ಥಂಕರರಾಗುವ ಯೋಗ್ಯತೆಯುಂಟಾಗುವುದು.

ದೇವತೆಗಳು ತೀರ್ಥಂಕರರ ಅವತಾರವನ್ನೆ ಹಾರಯಿಸಿಕೊಂಡು ಅವರ ಸೇವೆಗೆ ಸಿದ್ಧರಾಗಿರುವರು. ಆಗ ಆ ಮಹಾತ್ಮರು ತಮ್ಮ ಕೊಟ್ಟಕೊನೆಯ ಜನ್ಮದಲ್ಲಿ ಮನುಷ್ಯರಾಗಿ ಕ್ಷತ್ರಿಯ ವಂಶದಲ್ಲಿ ಹುಟ್ಟುವರು. ಆ ಜನ್ಮದಲ್ಲಿ ಅತಿ ಕಠಿನ ತಪಸ್ಸು ಮಾಡಿ ಕೇವಲ ಜ್ಞಾನವೆಂಬ ಉತ್ತಮ ರೀತಿಯ ಜ್ಞಾನವನ್ನು ಪಡೆಯುವರು. ಲೋಕದ ಉದ್ಧಾರಕ್ಕಾಗಿ ಕೆಲವು ಕಾಲ ಧರ್ಮಬೋಧೆ ಮಾಡುತ್ತಿದ್ದು ಕೊನೆಗೆ ಮುಕ್ತರಾಗುವರು.

—ಹೀಗೆಂಬುದು ಜೈನರ ನಂಬಿಕೆ. ಜೈನರು ದೇವರೆಂದು ಪೂಜಿಸುವುದು ಈ ಮಹಾಪುರುಷರನ್ನೇ. ನಾವಿರುವ ಈ ಕಾಲ ಅವಸರ್ಪಿಣಿಗೆ ಸೇರಿದ್ದು. ಈ ಅವಸರ್ಪಿಣಿಯಲ್ಲಿ ಅವತರಿಸಿದ ಮೊದಲನೆಯ ತೀರ್ಥಂಕರ ಋಷಭ (ವೃಷಭ ಎಂಬುದು ಈ ಪದದ ಮತ್ತೊಂದು ರೂಪ) ; ಕಡೆಯ ತೀರ್ಥಂಕರ ಮಹಾವೀರ ಸ್ವಾಮಿ. ಇಲ್ಲಿ ಕೊಟ್ಟಿರುವ ಕಥೆ ಆದಿ ತೀರ್ಥಂಕರನಿಗೆ ಸಂಬಂಧಿಸಿದ್ದು.]

## ನಾಭಿರಾಜ

ಅವಸರ್ಪಿಣಿ ಆರಂಭವಾಗುವ ಮೊದಲು ಲೋಕದಲ್ಲಿ ಎಲ್ಲವೂ ಸುಖಮಯವಾಗಿತ್ತು. ಜನರು ಯಾವುದಕ್ಕೂ ಕಷ್ಟಪಟ್ಟು ದುಡಿಯಬೇಕಾಗಿರಲಿಲ್ಲ. ಅವರಿಗೆ ಬೇಕಾಗಿದ್ದ ಬೆಳಕು, ಮನೆ, ಒಡವೆ, ಪಾತ್ರೆ, ಅನ್ನ, ಬಟ್ಟೆ ಮೊದಲಾದವನ್ನೆಲ್ಲ ಅವರು ಬಯಸಿದ ಕೂಡಲೆ ಹತ್ತು ಬಗೆಯ ಕಲ್ಪವೃಕ್ಷಗಳು ಕೊಟ್ಟುಬಿಡುತ್ತಿದ್ದವು. ಜನ ಪರಮಾನಂದದಿಂದಿದ್ದರು.

ಎಷ್ಟೋ ಕಾಲ ಕಳೆದ ಮೇಲೆ ಅಧರ್ಮದ ಫಲವಾಗಿ ಒಂದೊಂದಾಗಿ ಕಲ್ಪವೃಕ್ಷಗಳು ಮಾಯವಾದವು. ಲೋಕದ ಸ್ಥಿತಿ ಬದಲಾಗಿ ಜನಕ್ಕೆ ಕಳವಳ ಹೆಚ್ಚತೊಡಗಿತು. ಅಂಥ ಸಮಯಗಳಲ್ಲಿ ಕೆಲವರು ಮಹಾತ್ಮರು ಜನಕ್ಕೆ ತಿಳಿವಳಿಕೆ ಹೇಳಿ ಕಳವಳವನ್ನು ಕಳೆಯುತ್ತಿದ್ದರು ; ಸುಖಸಾಧನೆಯ ಮಾರ್ಗಗಳನ್ನು ಹೇಳಿಕೊಡುತ್ತಿದ್ದರು. ಇಂಥವರೇ ಮನುಗಳು. ಇವರು ಹದಿನಾಲ್ಕು ಮಂದಿ.

ನಾಭಿರಾಜನು ಹದಿನಾಲ್ಕನೆಯ ಮನು. ಅವನು ಅಯೋಧ್ಯೆಯಲ್ಲಿ ಆಳುತ್ತಿದ್ದನು. ಅವನು ಬಹು ಗುಣವಂತ ; ಮಹಾ ವೈಭವಶಾಲಿ. ಅವನಿಗೆ

ಮರುದೇವಿಯೆಂಬ ಹೆಂಡತಿಯಿದ್ದಳು. ಆ ದಂಪತಿಗಳ ಪುಣ್ಯ ಫಲಿಸಿದಂತೆ ಅವರಿಗೆ ಆದಿ ತೀರ್ಥಂಕರನು ಮಗನಾಗಿ ಅವತರಿಸಿದನು.

## ಋಷಭದೇವ

ತೀರ್ಥಂಕರನು ಹುಟ್ಟಿದ ಕೂಡಲೆ ದೇವಲೋಕದಲ್ಲಿ ಇಂದ್ರನ ಪೀಠ ಅಲುಗಿತು*; ಸಮಸ್ತ ದೇವತೆಗಳ ತಲೆಗಳೂ ತಮಗೆ ತಾವೇ ತಗ್ಗಿದವು. ದೇವತೆಗಳು ತಮ್ಮ ದಿವ್ಯಜ್ಞಾನದಿಂದ ಪರಮನ ಅವತಾರವನ್ನರಿತರು. ಪರಮಾನಂದಭರಿತರಾಗಿ ಇಂದ್ರನನ್ನು ಮುಂದಿಟ್ಟುಕೊಂಡು ಅಯೋಧ್ಯೆಗೆ ಬಂದರು. ಶಚೀದೇವಿ ಅದೃಶ್ಯಳಾಗಿ ಸೂತಿಕಾಗೃಹವನ್ನು ಹೊಕ್ಕು ಮರುದೇವಿಗೆ ಮಾಯಾ ನಿದ್ರೆ ಬರಿಸಿದಳು. ಪಕ್ಕದಲ್ಲಿ ಮಾಯಾ ಶಿಶುವನ್ನಿಟ್ಟು ಜಿನ ಶಿಶುವನ್ನು ಎತ್ತಿಕೊಂಡು ಬಂದು ಇಂದ್ರನ ಕೈಗೆ ಕೊಟ್ಟಳು. ಇಂದ್ರಾದಿಗಳು ಆ ಶಿಶುವನ್ನು ಐರಾವತದ ಮೇಲೇರಿಸಿಕೊಂಡು ಮಂದರ ಪರ್ವತಕ್ಕೆ ಹೋಗಿ ಅಲ್ಲಿ ಕ್ಷೀರ ಸಮುದ್ರದಿಂದ ಚಿನ್ನದ ಕೊಡಗಳಲ್ಲಿ ಕ್ಷೀರವನ್ನು ತುಂಬಿ ತಂದು ಆತನಿಗೆ ಅಭಿಷೇಕ ಮಾಡಿದರು; ಪೂಜಿಸಿ ಸ್ತೋತ್ರ ಮಾಡಿದರು. ಆ ಬಳಿಕ ಮತ್ತೆ ಅಯೋಧ್ಯೆಗೆ ಕರೆತಂದು ತಾಯಬಳಿ ಮಲಗಿಸಿದರು. ನಾಭಿರಾಜ ಮರುದೇವಿಯರು ತಮ್ಮ ಮಗ ಪರಮಾತ್ಮನೆಂದರಿತು ತಾವು ಧನ್ಯರಾದೆವೆಂದುಕೊಂಡರು. ಆ ಮಗನಿಗೆ ಇಂದ್ರನ ಸಲಹೆಯಂತೆ 'ಋಷಭ' ಎಂದು ನಾಮಕರಣ ಮಾಡಿದರು. 'ಪುರುದೇವ' ಎಂಬುದು ಆತನಿಗೆ ಮತ್ತೊಂದು ಹೆಸರು. ದೇವತೆಗಳು ಅಯೋಧ್ಯೆಯಲ್ಲಿ ಮತ್ತೊಮ್ಮೆ †ಜನ್ಮಾಭಿಷೇಕೋತ್ಸವ

---

* ತೀರ್ಥಂಕರರು ಹುಟ್ಟಿದಾಗ ಅದರ ಸೂಚನೆಯಾಗಿ ದೇವೇಂದ್ರನ ಪೀಠ ಅಲುಗತ್ತದೆ. ತಪಸ್ವಿಗಳಿಗೆ ಕೇವಲ ಜ್ಞಾನ ಹುಟ್ಟಿದಾಗಲೂ ಹೀಗೇ ಆಗುತ್ತದೆ. —ಹೀಗೆಂದು ಜೈನ ಪುರಾಣಗಳಲ್ಲಿ ಹೇಳಿದೆ.

† ತೀರ್ಥಂಕರನು ದೇವಲೋಕದಿಂದ ತಾಯಿಯ ಗರ್ಭಕ್ಕೆ ಅವತರಿಸಿದಾಗ, ತಾಯ ಹೊಟ್ಟೆಯಿಂದ ಹುಟ್ಟಿದಾಗ, ಮನೆ ಬಿಟ್ಟು ತಪಸ್ಸಿಗೆ ಹೊರಟಾಗ, ಕೇವಲ ಜ್ಞಾನ ಹುಟ್ಟಿದಾಗ, ಕೊನೆಯದಾಗಿ ಶರೀರವನ್ನು ತೊರೆದು ಮುಕ್ತಿಗೆ ಸಂದಾಗ— ಈ ಐದು ಸಂದರ್ಭಗಳಲ್ಲೂ ದೇವತೆಗಳು ಆನಂದ ನೃತ್ಯಮಾಡಿ ಉತ್ಸವಮಾಡುತ್ತಾರೆ. ಇವಕ್ಕೆ ಪಂಚಕಲ್ಯಾಣಗಳೆಂದು ಹೆಸರು.

ವನ್ನು ಮಾಡಿ ತೋರಿಸಿ ಆನಂದ ನೃತ್ಯವನ್ನಾಡಿದರು. ಜಿನ ಶಿಶುವಿಗೆ ಒಡನಾಡಿಗಳಾಗಿರಲು ಕೆಲವರು ದೇವಕುಮಾರರನ್ನು ಅಲ್ಲಿ ಬಿಟ್ಟು ಸ್ವರ್ಗಕ್ಕೆ ಪ್ರಯಾಣಮಾಡಿದರು.

ಋಷಭದೇವನು ದೇವತೆಗಳ ಒಡನಾಟದಲ್ಲಿ ಬೆಳೆಯುತ್ತ ಬಾಲ್ಯವನ್ನು ಕಳೆದು ಯೌವನದಲ್ಲಿ ಅಡಿಯಿಟ್ಟನು. ಆಗ ಅವನ ರೂಪು ಅದ್ಭುತವಾಗಿತ್ತು; ಸಮಸ್ತರನ್ನೂ ಮುಗ್ಧಮಾಡುತ್ತಿತ್ತು. ಆದರೂ ಅವನಿಗೆ ಮುಕ್ತಿಸಾಧನೆಯೇ ಗುರಿಯಾಗಿ ಸಂಸಾರದಲ್ಲಿ ಅನಾದರವುಂಟಾಯಿತು. ನಾಭಿರಾಜನು ಮಗನ ಅತಿಶಯವಾದ ಈ ರೂಪವೈಭವವನ್ನು ಕಂಡು ಅವನಿಗೆ ಮದುವೆ ಮಾಡ ಬಯಸಿದನು. ಅವನ ಮನಃಸ್ಥಿತಿಯನ್ನರಿತು, 'ಏನೆನ್ನುವನೋ' ಎಂದು ಅಳುಕಿದನು. ಅಂಜುತ್ತಂಜುತ್ತಲೆ ತನ್ನ ಅಸೆಯನ್ನು ಮಗನಿಗೆ ತಿಳಿಸಿದನು. ಋಷಭನು ತಂದೆತಾಯಿಗಳ ಸಂತೋಷಕ್ಕಾಗಿಯೂ ಲೋಕಾನುಗ್ರಹಕ್ಕಾಗಿಯೂ ಮದುವೆಗೆ ಒಡಂಬಟ್ಟನು. ಯಶಸ್ವತಿ, ಸುನಂದೆ ಎಂಬ ಇಬ್ಬರು ಕನ್ಯೆಯರನ್ನು ಆತನಿಗೆ ಮದುವೆ ಮಾಡಿದರು. ಸರ್ವಪ್ರಕಾರದಿಂದಲೂ ಅವರು ಆತನಿಗೆ ತಕ್ಕವರು. ತಮ್ಮ ಗುಣಶೀಲಗಳಿಂದ ಆ ಪರಮನ ಮನಸ್ಸನ್ನು ತಮ್ಮೆಡೆಗೆ ಆಕರ್ಷಿಸಿಕೊಂಡರು; ತಮ್ಮ ಸರ್ವಪ್ರೇಮವನ್ನೂ ಆ ಪರಮೇಶ್ವರನಿಗೆ ಅರ್ಪಿಸಿದರು. ಆದರ್ಶ ದಂಪತಿಗಳಾಗಿ ಅವರು ಕಾಲ ಕಳೆಯುತ್ತಿದ್ದರು.

## ಭರತನ ಜನನ

ಸಂಸಾರ ಸುಖದ ಸಾರವನ್ನು ಸವಿಯುತ್ತಿದ್ದ ಆ ದಂಪತಿಗಳಿಗೆ ಕಾಲ ಕಳೆದದ್ದೇ ಗೊತ್ತಾಗಲಿಲ್ಲ. ಅನೇಕ ವರ್ಷಗಳು ಕಳೆದ ಬಳಿಕ ಒಂದು ದಿನ ಹಿರಿಯ ರಾಣಿ ಯಶಸ್ವತಿ ನಿದ್ರಿಸುತ್ತಿದ್ದಾಗ ಸೂರ್ಯ, ಚಂದ್ರ, ಮೇರು ಪರ್ವತ, ಸಮುದ್ರ, ಪದ್ಮದಲ್ಲಿ ಉದ್ಭವಿಸಿ ಎದ್ದು ಬರುತ್ತಿದ್ದ ಲಕ್ಷ್ಮಿ, ಕಲ್ಪವೃಕ್ಷ—ಇವನ್ನು ಕನಸಿನಲ್ಲಿ ಕಂಡಳು. ಆ ಕನಸನ್ನು ಆದಿನಾಥನಿಗೆ ತಿಳಿಸಲು ಆತನು, "ಈ ಭರತ ಭೂಮಿಯನ್ನೆಲ್ಲ ಆಳುವ ಚಕ್ರವರ್ತಿ ನಿನ್ನ ಹೊಟ್ಟೆಯಲ್ಲಿ ಹುಟ್ಟುವನು. ಪುಣ್ಯಾತ್ಮರಾದ ಇನ್ನೂ ಹಲವರು ಮಕ್ಕಳು ನಿನಗಾಗುವರು" ಎಂದನು.

ಕೇಳಿ ಯಶಸ್ವತಿಯ ಆನಂದಕ್ಕೆ ಪಾರವಿಲ್ಲವಾಯಿತು. ಕಾಲಕ್ರಮದಲ್ಲಿ ಆಕೆ ಗರ್ಭಿಣಿಯಾದಳು. ಆಗ ಆಕೆ ಉಪವನಗಳಲ್ಲಿ ವಿಹರಿಸುವುದಕ್ಕೆ ಬದಲಾಗಿ ಹಿಮವತ್ಪರ್ವತ ಮತ್ತು ವಿಜಯಾರ್ಧ ಪರ್ವತಗಳ ಶಿಖರಗಳಲ್ಲಿ ಅಲೆದಾಡಬೇಕೆಂದು ಅಪೇಕ್ಷಿಸುವಳು; ಸಮುದ್ರದಲ್ಲಿ ಜಲಕೇಳಿಯಾಡಲು ಅತ್ಯಾಸೆ ಪಡುವಳು; ಮೃದು ಮಧುರವಾದ ಸರಸವಾಕ್ಯಗಳನ್ನು ಕೇಳಲು ಬೇಸರಪಟ್ಟು ಅಸಮಸಾಹಸಿಗಳ ವೀರಕಥೆಗಳನ್ನು ಕೇಳಲು ಉತ್ಸಾಹಗೊಳ್ಳುವಳು; ಪಂಜರದ ಗಿಳಿಗಳೊಡನೆ ಮಾತಾಡುವುದನ್ನು ಬಿಟ್ಟು ಸಿಂಹದ ಮರಿಗಳನ್ನು ತರಿಸಿ ನೋಡುತ್ತಿರುವಳು; ಕನ್ನಡಿಯಿದ್ದರೂ ಕತ್ತಿಯಲ್ಲಿ ಮುಖ ನೋಡಿಕೊಳ್ಳುವಳು; ಗೀತಕ್ಕೆ ಕಿವಿಗೊಡದೆ ಧನುಷ್ಟಂಕಾರವನ್ನು ಕೇಳ ಬಯಸುವಳು. ಹೀಗೆ ವೀರಜನನಿಗೆ ತಕ್ಕ ಬಯಕೆಗಳು ಆಕೆಗೆ ತಲೆದೋರುತ್ತಿದ್ದವು.

ನವಮಾಸ ತುಂಬಿತು. ಆಕೆ ಶುಭಮುಹೂರ್ತದಲ್ಲಿ ಮನುವಂಶಕ್ಕೆ ಕಲಶಪ್ರಾಯನಾದ ಸುಕುಮಾರನನ್ನು ಹಡೆದಳು. ಆ ಪುಣ್ಯಶಾಲಿಯ ಜನ್ಮದಿನದಲ್ಲಿ ಎಲ್ಲೆಲ್ಲೂ ತಂಗಾಳಿ ಸುಳಿಯಿತು; ಆಕಾಶವೆಲ್ಲ ಹಾಲಿನಲ್ಲಿ ತೊಳೆಯಿತೋ ಎಂಬಂತೆ ಹೊಳೆಯುತ್ತಿತ್ತು. ಎಲ್ಲೆಲ್ಲೂ ಹರ್ಷ ಕುಳುಕಾಡುತ್ತಿತ್ತು. ಅರಮನೆಯಲ್ಲಿನ ಸಡಗರವನ್ನಂತೂ ಹೇಳತೀರದು. ಎತ್ತಿ ಕಟ್ಟಿದ ಬಾವುಟಗಳು ಪಟಪಟನೆ ಹಾರುತ್ತಿದ್ದವು. ರತ್ನದ ತೋರಣಗಳು ಸುತ್ತಮುತ್ತ ಕಳೆಯೆರಚುತ್ತಿದ್ದವು. ಆನಂದಭೇರಿಗಳ ಗಂಭೀರ ಧ್ವನಿ ದಿಕ್ಕುದಿಕ್ಕಿಗೂ ಹಬ್ಬುತ್ತಿದ್ದಿತು. ಸಾಮಂತರಾಜರ ರಾಣಿಯರು ಸಂಭ್ರಮದಿಂದ ಹೊರಗೂ ಒಳಗೂ ಓಡಾಡುತ್ತಿದ್ದರು.

ನಾಭಿರಾಜನೂ ಇತರ ಹಿರಿಯರೂ ಹರ್ಷಗೊಂಡರು. ಸಮಸ್ತ ಬಂಧು ಜನರೂ ನೆರೆದು ಬಹು ಸಂಭ್ರಮದಿಂದ ಜಾತಕರ್ಮೋತ್ಸವವನ್ನು ನೆರವೇರಿಸಿದರು. ಎಲ್ಲರೂ ಸೇರಿ ಕೂಸಿಗೆ ಭರತ ಎಂದು ಹೆಸರಿಟ್ಟರು.

## ಭರತನ ಬಾಲ್ಯ

ಮಗು ಕಾಂತಿಯಿಂದ ಕಂಗೊಳಿಸುತ್ತ ಬಹು ಮುದ್ದಾಗಿತ್ತು. ತಾಯಿ ತಂದೆಗಳು ಅದರ ನಸುನಗೆಗೆ ಮರುಳಾಗಿ ಹೋದರು. ಗುರುಹಿರಿಯರಿಗೆ ಆ ಮಗುವಿನ ಸುಂದರ ಮುಖಮಂಡಲವನ್ನು ಎಷ್ಟು ನೋಡಿದರೂ ತೃಪ್ತಿ

ಯಿಲ್ಲ. ಅಂತಃಪುರದ ಪರಿಚಾರಿಕೆಯರು 'ನಾ ಮುಂದು ತಾ ಮುಂದು' ಎಂದು ಎತ್ತಿ ಆಡಿಸುತ್ತಿದ್ದರು; ಬಾಲಕನು ಒಬ್ಬರ ತೋಳಿನಿಂದ ಒಬ್ಬರ ತೋಳಿಗೆ ಹರಿದಾಡುತ್ತಿದ್ದನು. ಬಾಲಚಂದ್ರನಂತೆ ಆ ಬಾಲಕನು ದಿನದಿನಕ್ಕೆ ಬೆಳೆಯುತ್ತಿರಲು ದಟ್ಟಡಿ, ತೊದಲು ನುಡಿ, ಅರಳಿದ ಮುಖ, ಅದರಲ್ಲಿ ಸದಾ ಸುಳಿದಾಡುತ್ತಿರುವ ಕಿರುನಗೆ—ಇವುಗಳ ಚೆಲುವಿನಿಂದ ಎಲ್ಲರ ಮನಸ್ಸನ್ನೂ ಸೆಳೆಯುತ್ತಿದ್ದನು.

ಹೀಗೆ ಬೆಳೆಯುತ್ತಿರಲು ಆದಿನಾಥನು ಭರತನಿಗೆ ಅನ್ನಪ್ರಾಶನ, ಚೌಲ, ಉಪನಯನ, ಮೊದಲಾದ ಸಂಸ್ಕಾರಗಳನ್ನು ಕಾಲವರಿತು ತಾನೆ ನೆರವೇರಿಸಿದನು. ಬಾಲಕನಿಗೆ ಹತ್ತು ಹನ್ನೊಂದರ ವಯಸ್ಸಾಯಿತು. ಆಗ ಅವನು ಅಂತಃಪುರದ ದಾಸನ ಹೆಗಲೇರಿ ತರ್ಜನಿಯನ್ನು ಅಂಕುಶದಂತೆ ನಸುಬಾಗಿಸಿ ಪ್ರಮದವನಕ್ಕೆ ಪ್ರವೇಶಮಾಡುವನು. ಅಲ್ಲಿನ ಕೃತಕ ಗಿರಿಗಳನ್ನು ಮಹೋನ್ನತವಾದ ಗಿರಿದುರ್ಗಗಳೆಂದೇ ಭಾವಿಸಿ ಅವನ್ನು ಗೆಲ್ಲಲು ಮುನ್ನುಗ್ಗಿಸುವನು. ದಟ್ಟವಾಗಿ ಬೆಳೆದ ಬಾಳೆಯ ಗುಂಪನ್ನು ವನದುರ್ಗಗಳೆಂದು ತಿಳಿದು ಧ್ವಂಸ ಮಾಡುವನು. ಮೊಳಕಾಲವರೆಗೆ ಬರುವ ನೀರ್ಗಾಲುವೆಗಳನ್ನು ಅಸಾಧ್ಯ ಜಲದುರ್ಗಗಳೆಂದುಕೊಂಡು ನುಗ್ಗಿ ಕವಡಿಬಿಡುವನು. ಬಿಳಿಯ ತಾವರೆಗಳನ್ನು ಶ್ವೇತಚ್ಛತ್ರಗಳೆಂದು ಹಿಡಿಸಿಕೊಳ್ಳುವನು. ಅಶೋಕದ ಎಳ ಚಿಗುರನ್ನು ವಿಜಯ ಧ್ವಜವೆಂದು ಎತ್ತಿಹಿಡಿಸುವನು. ಒಡನಾಡಿಗಳು 'ಜಯ! ಜಯ!' ಎಂದು ಆನಂದ ಕೋಲಾಹಲ ಮಾಡುತ್ತಿರಲು ಲತಾಗೃಹಕ್ಕೆ ಬಂದು ರಾಜಠೀವಿಯಿಂದ ಪೀಠದ ಮೇಲೆ ಮಂಡಿಸುವನು. ಬಳಿಕ ತನ್ನ ಸುತ್ತಲೂ ನೆರೆದ ಬಾಲಕವೃಂದಕ್ಕೆ 'ನಿನಗೆ ಈ ದೇಶ, ನಿನಗೆ ಆ ದೇಶ' ಎಂದು ಒಬ್ಬೊಬ್ಬರಿಗೆ ಒಂದೊಂದು ದೇಶವನ್ನು ಮೆಚ್ಚುಕೊಡುವನು.

ಈ ರೀತಿ ಸಾಮ್ರಾಜ್ಯದಾಟದಲ್ಲಿ ಆನಂದಿಸುತ್ತಿದ್ದ ಭರತನಿಗೆ ಕ್ರಮಕ್ರಮವಾಗಿ ಬಾಲ್ಯ ಕಳೆದು ಯೌವನ ತಲೆದೋರಿತು. ಆಗ ಅವನು ಸರ್ವಪ್ರಕಾರದಲ್ಲಿಯೂ ತಂದೆಯನ್ನೆ ಹೋಲುತ್ತಿದ್ದನು. ತಂದೆಯ ರೂಪು, ತಂದೆಯ ಚೆಲುವು, ತಂದೆಯ ರೀತಿ, ತಂದೆಯ ಮಾತಿನ ಸೊಗಸು, ಎಲ್ಲವೂ ಅವನಲ್ಲಿ ಪ್ರತಿಬಿಂಬಿಸುತ್ತಿದ್ದವು. ತಂದೆಯ ಅಚ್ಚಿನಲ್ಲಿ ಒತ್ತಿದ ಹಾಗೆ ಭರತಕುಮಾರನು ಪ್ರಕಾಶಿಸುತ್ತಿದ್ದನು.

## ಬಾಹುಬಲಿ

ಭರತನು ಹುಟ್ಟಿದ ಸ್ವಲ್ಪ ಕಾಲದ ಮೇಲೆ ಕಿರಿಯ ರಾಣಿ ಸುನಂದೆ ಗರ್ಭಿಣಿಯಾದಳು. ಆ ಕಾಲದಲ್ಲಿ ಆಕೆಗೆ ದಿಗ್ಗಜಗಳನ್ನು ಹೋಲುವ ಮದ್ದಾನೆಗಳ ಹೋರಾಟವನ್ನು ನೋಡಬೇಕೆಂದೂ, ಜಗಜಟ್ಟಿಗಳೆಂದು ಹೆಸರುವಾಸಿ ಪಡೆದ ಮಲ್ಲರ ಮಲ್ಲಗಾಳಗವನ್ನು ಕಾಣಬೇಕೆಂದೂ ಅತಿ ಕುತೂಹಲವಾಗುತ್ತಿತ್ತು. ಆ ಬಗೆಯ ಅಸಾಧಾರಣವಾದ ಬಯಕೆಗಳು ಗರ್ಭದಲ್ಲಿ ಬೆಳೆಯುತ್ತಿದ್ದ ಮಗುವಿನ ಬಾಹುಬಲವನ್ನು ಸಾರಿ ಹೇಳುವಂತಿತ್ತು. ದಿನ ತುಂಬಿದ ಬಳಿಕ ಮನುಕುಲದ ಯಶಶ್ರೀ ಜಯಶ್ರೀಗಳು ಮೂಡಿ ಬಂದಂತೆ ಒಬ್ಬ ಕುಮಾರನು ಹುಟ್ಟಿದನು. ಆ ಸಮಯದಲ್ಲಿ ದೇವತೆಗಳೆಲ್ಲ ಆನಂದಿಸಿದರು. ಅರಮನೆಯ ಆನಂದವಾದ್ಯಗಳ ಜೊತೆಗೆ ದೇವಲೋಕದ ವಾದ್ಯಗಳೂ ಮೊಳಗಿದವು. ಊರಿನಲ್ಲಿ ಎಲ್ಲಿ ನೋಡಿದರೂ ಧ್ವಜತೋರಣಗಳನ್ನೆತ್ತಿ ಕಟ್ಟಿ ಪರಿಮಳ ಪುಷ್ಪಗಳನ್ನೆರಚಿ ಸರ್ವಾಲಂಕಾರ ಭೂಷಿತರಾಗಿ ಜನ ಆನಂದೋತ್ಸವಗಳಲ್ಲಿ ಮುಳುಗಿದ್ದರು.

ಮಗುವಿಗೆ ' ಬಾಹುಬಲಿ ' ಎಂದು ಹೆಸರಿಟ್ಟರು. ಅದರ ಬಾಲಕೇಳಿಗಳಿಂದ ನಾಭಿರಾಜನೇ ಮೊದಲಾದವರೆಲ್ಲರೂ ಪರಮಾನಂದಭರಿತರಾದರು. ಬಾಹುಬಲಿ ಬೆಳೆಬೆಳೆದಂತೆ ತನ್ನ ಹೆಸರನ್ನು ಸಾರ್ಥಕಪಡಿಸುತ್ತಿದ್ದನು. ಜೊತೆಯ ಬಾಲಕರೊಡನೆ ಕುಸ್ತಿಮಾಡುವನು ; ತೋಳ್ತಟ್ಟಿ ಜಟ್ಟಿಗಳ ಮೇಲೆ ಬಿದ್ದು ಕಾಳಗಮಾಡುವನು. ಹೀಗೆ ತೋಳ್ಬಲವನ್ನು ಮೆರಸುವುದರಲ್ಲೇ ಮನಮೆಚ್ಚಿ ಆನಂದಿಸುತ್ತಿದ್ದನು.

ನವಯೌವನದ ಕಳೆ ಅಡಿಯಿಡುತ್ತಿರಲು ಅವನ ಚೆಲುವಿಗೆ ಎಣೆಯಿಲ್ಲವಾಯಿತು. ಅರಳು ತಾವರೆಯನ್ನು ಹೋಲುವ ಮುಖ, ಕಮಲದಳದಂತಹ ಕಣ್ಣುಗಳು, ಮೇಘದಂತೆ ಗಂಭೀರವಾದ ದನಿ, ಕಪ್ಪಾದ ತಲೆಗೂದಲು, ವಿಸ್ತಾರವಾದ ಎದೆ, ಮೊಳಕಾಲವರೆಗೂ ನೀಡಿದ ಬಲವಾದ ತೋಳುಗಳು, ದುಂಡುದೊಡೆಗಳು, ತುಂಬಿದ ಮೈಕಟ್ಟು, ಕುಲಶೈಲದಂತೆ ಔನ್ನತ್ಯ—ಹೀಗೆ ಬಾಹುಬಲಿ ಸಕಲ ಸೌಂದರ್ಯ ಸಂಪನ್ನನಾದನು. ಅವನ ಆ ಅಸಮಾನವಾದ ಚೆಲುವನ್ನು ಒಮ್ಮೆ ಕಂಡವರು ಅದನ್ನೆಂದಿಗೂ ಮರೆಯುವಂತಿಲ್ಲ.

ಕನಸಿನಲ್ಲಿ ಕೂಡ ಅದನ್ನೆ ನೆನೆಯುವರು. ಅವನು ಆ ಕಾಲದ * ಕಾಮದೇವ. ಎಂದಮೇಲೆ ಅವನ ಸೌಂದರ್ಯಕ್ಕೆ ಬೇರೆ ವರ್ಣನೆಯೇಕೆ ?

## ಬೇರೆ ಮಕ್ಕಳು

ಯಶಸ್ವತಿಗೆ ಭರತನಾದ ಮೇಲೆ ತೊಂಬತ್ತೊಂಭತ್ತು ಮಂದಿ ಗಂಡು ಮಕ್ಕಳೂ ಎಲ್ಲರಿಗಿಂತಲೂ ಕಿರಿಯವಳಾಗಿ ಒಬ್ಬ ಮಗಳೂ ಹುಟ್ಟಿದರು. ಬಾಹುಬಲಿ ಹುಟ್ಟಿದ ಬಳಿಕ ಸುನಂದೆ ಒಬ್ಬ ಮಗಳನ್ನು ಮಾತ್ರ ಪಡೆದಳು. ಯಶಸ್ವತಿಯ ಮಗಳು ಬ್ರಹ್ಮಿ; ಸುನಂದೆಯ ಮಗಳು ಸೌಂದರಿ. ಈ ಮಕ್ಕಳೆಲ್ಲರೂ ಕುಲಭೂಷಣರಾಗಿ ಬೆಳಗುತ್ತಿದ್ದರು.

ಇವರನ್ನೆಲ್ಲ ಕಂಡು ಆದಿಪುರುಷನ ಅಕ್ಕರೆ ಉಕ್ಕಿ ಬಂತು. ಅವರೆಲ್ಲರಿಗೂ ತಕ್ಕ ಭೂಷಣಗಳನ್ನು ತನ್ನ ಬುದ್ಧಿಬಲದಿಂದ ಹೊಸದಾಗಿ ನಿರ್ಮಿಸಿ ಕೊಟ್ಟನು. ಅವರೆಲ್ಲರೂ ಕಳೆಯೆರಚುವ ಆ ಅಲಂಕಾರಗಳನ್ನು ತೊಟ್ಟು ಬೆಳಕಿನ ಕಣಗಳಿಂದಲೇ ನಿರ್ಮಿತರಾಗಿರುವರೋ ಎಂಬಂತೆ ತೋರುತ್ತಿದ್ದರು.

## ವಿದ್ಯೋಪದೇಶ

ಈ ಮಕ್ಕಳಿಗೆ ತಕ್ಕ ವಿದ್ಯೆಗಳನ್ನು ಕಲಿಸಬೇಕೆಂದು ಆದಿನಾಥನಿಗೆ ಮನಸ್ಸಾಯಿತು. ಆ ಹೊತ್ತಿಗೆ ಸರಿಯಾಗಿ ಬ್ರಹ್ಮಿ ಸೌಂದರಿಯರಿಬ್ಬರೂ ತಂದೆಯ ಸಮೀಪಕ್ಕೆ ಬಂದು ನಮಸ್ಕಾರ ಮಾಡಿ ದೂರ ಕುಳಿತುಕೊಂಡರು. ಋಷಭಸ್ವಾಮಿಯು ಮಕ್ಕಳಿಬ್ಬರನ್ನೂ ಹತ್ತಿರ ಕರೆದು ತೊಡೆಯ ಮೇಲೆ ಕೂರಿಸಿಕೊಂಡು, "ಮಕ್ಕಳಿರಾ, ನಿಮ್ಮಿಬ್ಬರ ನಡವಳಿಕೆಯೂ ವಿನಯಕ್ಕೆ ನೆಲೆಯಾಗಿದೆ. ಈ ವಯಸ್ಸು, ಈ ಶೀಲ, ಈ ವಿನಯ—ಎಲ್ಲಕ್ಕೂ ವಿದ್ಯೆಯನ್ನು ಸೇರಿಸಿದರೆ ಆಗ ನೀವೆ ಜಗತ್ಪಾವನೆಯರಾಗುತ್ತೀರಿ. ಎಲ್ಲರನ್ನೂ ಮೀರಿಸುತ್ತೀರಿ" ಎಂದು ನುಡಿದನು. ಬಳಿಕ ಅವರಿಬ್ಬರನ್ನೂ ಎರಡು ಪಕ್ಕಗಳಲ್ಲಿ ಕೂರಿಸಿಕೊಂಡು ಹಿರಿಯ ಮಗಳು ಬ್ರಹ್ಮಿಗೆ ಲಿಪಿಗಳನ್ನೂ ಸೌಂದರಿಗೆ ಗಣಿತವನ್ನೂ ಉಪದೇಶಮಾಡಿದನು. ಇದರ ಜೊತೆಗೆ ವಾಙ್ಮಯವನ್ನೂ

---

* ಜೈನಪುರಾಣಗಳು ಒಟ್ಟು ಇಪ್ಪತ್ತುನಾಲ್ಕು ಮಂದಿ ಕಾಮದೇವರು ಬೇರೆ ಬೇರೆ ಕಾಲಗಳಲ್ಲಿದ್ದರೆಂದು ಹೇಳುತ್ತವೆ. ಅವರಲ್ಲಿ ಬಾಹುಬಲಿ ಮೊದಲನೆಯವನು.

ಸಮಸ್ತ ಕಲೆಗಳನ್ನೂ ತಿಳಿಸಿ ಅವರು ಸಕಲ ವಿದ್ಯಾಪರಿಪೂರ್ಣೆಯರಾಗುವಂತೆ ಮಾಡಿದನು.

ಹೀಗೆ ಮೊದಲು ಹೆಣ್ಣು ಮಕ್ಕಳಿಗೆ ವಿದ್ಯೋಪದೇಶಮಾಡಿ ಆಮೇಲೆ ಗಂಡುಮಕ್ಕಳಿಗೆ ಕಲಿಸಕೊಡಗಿದನು. ಭರತನಿಗೆ ಅರ್ಥಶಾಸ್ತ್ರ ಭರತಶಾಸ್ತ್ರಗಳನ್ನು ತಿಳಿಸಿದನು. ಬಾಹುಬಲಿಗೆ ಕಾಮತಂತ್ರ, ಆಯುರ್ವೇದ, ಧನುರ್ವೇದ, ಹಸ್ತಿತಂತ್ರ, ಅಶ್ವತಂತ್ರ, ರತ್ನಪರೀಕ್ಷೆ ಮೊದಲಾದವನ್ನು ಕಲಿಸಿದನು. ಉಳಿದ ಮಕ್ಕಳಿಗೆಲ್ಲ ಗೀತವಾದ್ಯಗಳ ಅರಿವನ್ನೊಳಗೊಂಡ ಗಂಧರ್ವ ಶಾಸ್ತ್ರ, ಚಿತ್ರಕಲೆ, ವಾಸ್ತುವಿದ್ಯೆ ಮುಂತಾದ ಲೋಕೋಪಕಾರಿಗಳಾದ ಶಾಸ್ತ್ರಗಳು ಎಷ್ಟಿವೆಯೊ ಅಷ್ಟನ್ನೂ ಉಪದೇಶಮಾಡಿದನು. ಉತ್ತಮ ವಿದ್ಯೆಗಳಿಗೆ ನೆಲೆಯಾದ ಮಕ್ಕಳೆಲ್ಲರೂ ತಮ್ಮ ನಯ ವಿನಯಗಳಿಂದ ತಂದೆಯ ಮನಸ್ಸಿಗೆ ಆನಂದವುಂಟುಮಾಡುತ್ತಿದ್ದರು.

## ಕೃತಯುಗಾರಂಭ

ಅಷ್ಟುಹೊತ್ತಿಗೆ ಲೋಕದಲ್ಲಿ ಜನ ಕಷ್ಟಪಟ್ಟು ದುಡಿಯದೆ ಸುಖವಾಗಿ ಬಾಳಬಹುದಾಗಿದ್ದ ಭೋಗಭೂಮಿ ಸ್ಥಿತಿ ಪೂರ್ತಿಯಾಗಿ ಮಾಯವಾಯಿತು. ಮೈಮುರಿದು ಕೆಲಸಮಾಡಿಯೇ ಬದುಕಬೇಕಾದ ಕರ್ಮಭೂಮಿ ಸ್ಥಿತಿ ಪ್ರಾರಂಭವಾಯಿತು. ಆಗ ಮೊದಲು ತಾವಾಗಿಯೇ ಹುಟ್ಟಿ ಬೆಳೆದು ಫಲ ಕೊಡುತ್ತಿದ್ದ ಸಸ್ಯಾದಿಗಳ ಸಾರ ಕುಗ್ಗಿಹೋಯಿತು. ಜನರಿಗೆ ರೋಗರುಜಿನಗಳ ಬಾಧೆಯೂ ಬಂದೊದಗಿತು. ಮುಂಗಾಣದೆ ಪ್ರಜೆಗಳೆಲ್ಲ ಒಟ್ಟುಗೂಡಿ ನಾಭಿರಾಜನ ಸಲಹೆಯಂತೆ ಆದಿನಾಥನ ಬಳಿ ಬಂದರು. ತಮ್ಮ ಹಸಿವು ಸಂಕಟಗಳನ್ನು ಪರಿಹರಿಸಿ ಬಾಳುವ ದಾರಿ ತೋರಬೇಕೆಂದು ಮೊರೆಯಿಟ್ಟರು. ಋಷಭಸ್ವಾಮಿಯು ಅವರ ಮೊರೆಯನ್ನು ಕೇಳಿ, ‘ಅಂಜಬೇಡಿ’ ಎಂದು ಅವರನ್ನೆಲ್ಲ ಸಂತಯಿಸಿದನು.

ಬಳಿಕ ಭೂಮಿಯನ್ನು ಅಲ್ಲಲ್ಲಿಯ ಪ್ರಕೃತಿ ಸ್ವಭಾವಕ್ಕನುಗುಣವಾಗಿ ಅನೇಕ ಬಗೆಯಾಗಿ ವಿಂಗಡಿಸಿದನು. ಆಯಾ ಪ್ರದೇಶದಲ್ಲಿ ಹೇಗೆ ಹೇಗೆ ಜೀವನ ಸೌಕರ್ಯಗಳನ್ನು ದೊರಕಿಸಿಕೊಳ್ಳಬಹುದೆಂಬುದನ್ನು ತಿಳಿಸಿದನು. ದೇಶಗಳನ್ನು ಆಳುವುದು, ತೆರಿಗೆಯೆತ್ತುವುದು, ಜನ ನೆಮ್ಮದಿಗೆ ದಾರಿಮಾಡು

ವುದು, ಮೊದಲಾದ ಕ್ರಮವನ್ನು ವಿವರಿಸಿದನು. ಜನರ ಜೀವನೋಪಾಯ ಕ್ಕಾಗಿ ಬರವಣಿಗೆ, ಕೃಷಿ, ವಾಣಿಜ್ಯ, ಹಸ್ತಕೌಶಲ್ಯದಿಂದ ಸಾಧಿಸುವ ಶಿಲ್ಪ, ಕತ್ತಿ ಹಿಡಿದು ರಕ್ಷಣೆ ಮಾಡುವ ಶಸ್ತ್ರಕರ್ಮ, ಪಶುಪಾಲನೆ, ಸೇವಾವೃತ್ತಿ ಮೊದಲಾದ ವೃತ್ತಿಗಳನ್ನು ಕಲ್ಪಿಸಿದನು. ಜನರನ್ನು ಕ್ಷತ್ರಿಯ, ವೈಶ್ಯ, ಶೂದ್ರ ರೆಂದು ಮೂರು ವರ್ಣಗಳಾಗಿ ವಿಂಗಡಿಸಿ ಅವರವರ ಕರ್ತವ್ಯಗಳನ್ನು ಗೊತ್ತು ಮಾಡಿದನು. ಈ ವ್ಯವಸ್ಥೆಯನ್ನು ಮೀರದೆ ನಡೆಯುತ್ತಿದ್ದರೆ ಈ ಕೀಳ್ಗಾಲ ದಲ್ಲೂ ಜನ ಸುಖವಾಗಿ ಬಾಳಬಹುದೆಂದು ನಿಯಮಿಸಿದನು. ಆದಿನಾಥನು ಹೀಗೆ ಕಟ್ಟುಪಾಡು ಮಾಡಿದಂದಿನಿಂದ ಕೃತಯುಗ ಪ್ರಾರಂಭವಾಯಿತು.

ಅದೇ ಕಾಲದಲ್ಲಿ ಋಷಭಸ್ವಾಮಿಗೆ ಪಟ್ಟಾಭಿಷೇಕವಾಯಿತು. ರಾಜ್ಯ ವಾಳುತ್ತ ತಾನು ಮಾಡಿದ ಲೋಕವ್ಯವಸ್ಥೆಯನ್ನು ಸರಿಯಾಗಿ ನಡಸು ವುದಕ್ಕೂ, ಮೀರಿದವರನ್ನು ಉಚಿತ ರೀತಿಯಲ್ಲಿ ಶಿಕ್ಷಿಸುವುದಕ್ಕೂ ಯೋಗ್ಯ ವಾದ ರಾಜಕುಲಗಳನ್ನು ಸ್ಥಾಪಿಸಿದನು. ಋಷಭಸ್ವಾಮಿಯೇ ಆದರ್ಶ ರಾಜ ನಾಗಿ ರಾಜ್ಯಪಾಲನೆ ಮಾಡುತ್ತಿರಲು ನೆಲವೆಲ್ಲ ಹರ್ಷಕ್ಕೆ ನೆಲೆಯಾಗಿತ್ತು.

## ಋಷಭನ ವೈರಾಗ್ಯ, ಪರಿನಿಷ್ಕ್ರಮಣ

ಮೆಚ್ಚಿನ ಮಡದಿಯರು, ವಿದ್ಯಾ ವಿನಯ ಸಂಪನ್ನರಾದ ಮಕ್ಕಳು, ತೃಪ್ತರಾದ ಪ್ರಜೆಗಳು,—ಇವರಿಂದ ಕೂಡಿ ಪರಮಾನಂದಭರಿತನಾಗಿ ರಾಜ್ಯ ಭಾರ ಮಾಡುತ್ತ ಆದಿನಾಥನು ಅನೇಕ ವರ್ಷಗಳನ್ನು ಕಳೆದನು. ಬಳಿಕ ಒಮ್ಮೆ ಆತನು ಒಡ್ಡೋಲಗದಲ್ಲಿರುವಾಗ ದೇವೇಂದ್ರನು ದೇವಸಮೂಹ ದೊಡನೆ ಆಸ್ಥಾನಕ್ಕೆ ಬಂದನು. ಅಪ್ಸರೆಯರ ನೃತ್ತಸೇವೆಯಿಂದ ಪರಮ ನನ್ನು ಸಂತೋಷಪಡಿಸಬೇಕೆಂಬ ತಮ್ಮ ಬಯಕೆಯನ್ನು ಅರಿಕೆಮಾಡಿ ಕೊಂಡನು. ಆದಿನಾಥನು ತಾನು ಯಾವೊಂದು ಆಸೆಯೂ ಇಲ್ಲದವನಾದರೂ ಸಮಸ್ತ ಸುರ ನರರ ಆಸೆ ಪೂರ್ಣವಾಗಲೆಂಬ ಭಾವನೆಯಿಂದ ಅದಕ್ಕೆ ಸಮ್ಮತಿ ಯಿತ್ತನು.

ದೇವವಾದ್ಯಗಳ ಮಧುರರವವೂ, ದೇವಸ್ತ್ರೀಯರ ಇಂಪಾದ ಗಾನವೂ ಅಮೃತದ ಮಳೆ ಸುರಿದಂತೆ ರಂಜಿಸುತ್ತಿರಲು ನೀಳಾಂಜನೆಯೆಂಬ ದೇವ ನರ್ತಕಿಯೊಬ್ಬಳು ನರ್ತನಕ್ಕೆ ಪ್ರಾರಂಭಿಸಿದಳು. ಅವಳ ರೂಪಕ್ಕೂ ನರ್ತನ

ಕೌಶಲ್ಯಕ್ಕೂ ಸಭೆಯೆಲ್ಲ ಬೆರಗಾಯಿತು. ನಿಸ್ಸಂಗನಾದ ಆದಿನಾಥನೇ ಆ ಸೊಗಸಿಗೆ ಮನಸೋತು ನೋಡುತ್ತಿದ್ದನು.

ಹಾಗೆ ನೋಡುತ್ತಿದ್ದಾಗ ಆ ನೀಳಾಂಜನೆಗೆ ಆಯುಸ್ಸು ಮುಗಿಯಿತು. ಆಡುತ್ತಾಡುತ್ತ ಆಕೆ ಮಿಂಚಿನಂತೆ ತಟಕ್ಕನೆ ಮಾಯವಾದಳು. ರಸಭಂಗವಾದೀತೆಂದು ಇಂದ್ರನು ತನ್ನ ಶಕ್ತಿಯಿಂದ ಅವಳಂತೆಯೇ ಮತ್ತೊಬ್ಬಳನ್ನು ಸೃಷ್ಟಿಸಿ ನರ್ತನವನ್ನು ಮುಂದುವರಿಸಿದನು. ಅಲ್ಲಿ ನೆರೆದ ನರರಾಗಲಿ ಸುರರಾಗಲಿ ಅದನ್ನು ಅರಿಯಲಿಲ್ಲ; ಮೊದಲಿನ ನೀಳಾಂಜನೆಯೆಂದೇ ಭಾವಿಸಿದ್ದರು. ಆದಿನಾಥನಿಗೆ ಮಾತ್ರ ಆ ಗುಟ್ಟು ಗೊತ್ತಾಗಿಹೋಯಿತು.

ಅದನ್ನು ಕಂಡು ಋಷಭಸ್ವಾಮಿಯು "ದೇಹ ಎಷ್ಟು ಅನಿತ್ಯವಾದ್ದು!" ಎಂದು ಆಶ್ಚರ್ಯಪಟ್ಟನು. ಸಂಸಾರದ ಅಸ್ಥಿರತೆ ಚೆನ್ನಾಗಿ ಮನದಟ್ಟಾಯಿತು. 'ಇನ್ನು ನನಗೆ ಈ ಭೋಗ ಭಾಗ್ಯಗಳೊಂದೂ ಬೇಡ' ಎಂದು ನಿಶ್ಚಯಮಾಡಿ ಎಲ್ಲವನ್ನೂ ತೊರೆದನು. ಮುಕ್ತಿಯನ್ನು ಸಾಧಿಸಬೇಕೆಂದು ಸಂಕಲ್ಪಿಸಿ ತಪಸ್ಸಿಗೆ ಹೊರಡಲು ಸಿದ್ಧನಾದನು.

ಬಳಿಕ ಭರತನನ್ನು ಕರಸಿ ಆತನಿಗೆ ಪಟ್ಟಾಭಿಷೇಕ ಮಾಡಿ ರಾಜಪದವಿಯನ್ನಿತ್ತನು. ಬಾಹುಬಲಿಗೆ ಯುವರಾಜಪದವಿಯನ್ನು ಕೊಟ್ಟನು. ಭರತನು ಅಯೋಧ್ಯಾ ಪಟ್ಟಣದಲ್ಲಿಯೂ ಬಾಹುಬಲಿ ಪೌದನಪುರದಲ್ಲಿಯೂ ಆಳುತ್ತಿರುವಂತೆ ನಿಯಮಿಸಿದನು. ಉಳಿದ ಮಕ್ಕಳಿಗೂ ಭೂಮಂಡಲವನ್ನು ಹಂಚಿಕೊಟ್ಟು ಒಬ್ಬೊಬ್ಬರನ್ನು ಒಂದೊಂದು ಕಡೆ ನಿಲ್ಲಿಸಿದನು. ಬಂಧುಗಳೆಲ್ಲರಿಗೂ ಉಚಿತ ಸತ್ಕಾರ ಮಾಡಿ ತಾಯಿತಂದೆಗಳ ಅಪ್ಪಣೆ ಪಡೆದು ತಪಸ್ಸಿಗೆ ಹೊರಟನು.

ಆಗ ದೇವತೆಗಳು ಮತ್ತೊಮ್ಮೆ ಋಷಭಸ್ವಾಮಿಗೆ ಅಭಿಷೇಕ ಮಾಡಿದರು. ಅನಂತರ ಪಲ್ಲಕ್ಕಿಯೊಂದನ್ನು ಅಣಿಮಾಡಿ ತಂದರು. ಋಷಭಸ್ವಾಮಿ ಅದನ್ನು ಹತ್ತಿದ ಬಳಿಕ ಏಳಡಿಗಳಷ್ಟು ದೂರ ಕ್ಷತ್ರಿಯ ರಾಜರು ಅದನ್ನು ಹೊತ್ತು ನಡೆದರು. ಬಳಿಕ ದೇವತೆಗಳು ತಮ್ಮ ಕೈಗೆ ತೆಗೆದುಕೊಂಡು ಆಕಾಶ ಮಾರ್ಗದಲ್ಲಿ ಸಂಭ್ರಮದಿಂದ ನಡೆದರು. ಊರ ಹೊರಗಿನ ವನದಲ್ಲಿ ಪಲ್ಲಕ್ಕಿಯನ್ನಿಳಿಸಲು ಆದಿನಾಥನು ವಿಧಿವಿಹಿತವಾಗಿ ದೀಕ್ಷೆಯನ್ನು ಕೈಕೊಂಡನು. ಆತನು ಕಿತ್ತೆಸೆದ ಕುರುಳನ್ನು ಪೂಜಿಸಿ ದೇವತೆಗಳು

ಕ್ಷೀರಸಮುದ್ರದಲ್ಲಿ ಹಾಕಿ ಬಂದರು. ಹೀಗೆ 'ಪರಿನಿಷ್ಕ್ರಮಣ ಕಲ್ಯಾಣ' ವನ್ನು ನೆರವೇರಿಸಿ ಮುನೀಂದ್ರನ ಪಾದಗಳಿಗೆರಗಿ ಸ್ವರ್ಗಕ್ಕೆ ನಡೆದರು. ಭರತನೂ ಭಕ್ತಿಯಿಂದ ಆತನನ್ನು ಪೂಜಿಸಿ ರಾಜಧಾನಿಗೆ ಹಿಂದಿರುಗಿದನು.

## ಆದಿನಾಥನ ತಪಸ್ಸು

ಆದಿನಾಥನು ಮೌನ ಮತ್ತು ಅನಶನ ವ್ರತಗಳನ್ನು ಧರಿಸಿ ಧ್ಯಾನಾಸಕ್ತನಾದನು. 'ಇನ್ನು ಆರು ತಿಂಗಳು ಕಳೆದಲ್ಲದೆ ಕೈಯೆತ್ತುವುದಿಲ್ಲ' ಎಂದು ಸಂಕಲ್ಪಿಸಿ ಪ್ರತಿಮಾಯೋಗದಲ್ಲಿ ನಿಂತನು. ಏನೇನೋ ಅಡ್ಡಿಗಳು ಬಂದವು. ಆದರೂ ಆತನ ಧ್ಯಾನಕ್ಕೆ ಚ್ಯುತಿ ಬರಲಿಲ್ಲ. ಆತನ ತಪಸ್ಸು ವೃದ್ಧಿಯಾಗುತ್ತ ಬಂದಂತೆಲ್ಲ ಅದರ ಪ್ರಭಾವದಿಂದ ಅಲ್ಲಿದ್ದ ಸಮಸ್ತ ಪ್ರಾಣಿವರ್ಗವೂ ಜಾತಿ ವೈರವನ್ನು ತೊರೆದು ಆ ಕಾಡಿನಲ್ಲಿ ಅನ್ಯೋನ್ಯ ಪ್ರೀತಿಯಿಂದ ಬಾಳುತ್ತಿದ್ದವು.

ಆರು ತಿಂಗಳು ಕಳೆದ ಮೇಲೆ ಧ್ಯಾನವನ್ನು ಮುಗಿಸಿ ಚರಿಗೆಗೆ ಹೊರಟನು. ಉತ್ತಮ ಆಹಾರಕ್ಕಾಗಿ ದೇಶದೇಶಗಳನ್ನು ಸಂಚರಿಸಿದನು. ಜನರು ಅಂಥ ಮುನಿಗೆ ಭಿಕ್ಷೆ ನೀಡಲು ಯೋಗ್ಯವಾದ ವಸ್ತು ಯಾವುದೆಂದರಿಯದೆ ಬಟ್ಟೆ ಬರೆ ಊಟ ತಿಂಡಿಗಳನ್ನು ಅರ್ಪಿಸಬಂದರು. ಮುನೀಶ್ವರನು ಯಾವುದನ್ನೂ ಸ್ವೀಕರಿಸಲಿಲ್ಲ. ಕಡೆಗೆ ಹಸ್ತಿನಾವತಿಯ ಅರಸನಾದ ಶ್ರೇಯಾಂಸನೆಂಬುವನು ಇಷ್ಟಾರ್ಥವನ್ನು ಸಲ್ಲಿಸಲು ಕಲ್ಪವೃಕ್ಷವೇ ಹತ್ತಿರ ಬರುತ್ತಿರುವುದೋ ಎಂಬಂತೆ ಬರುತ್ತಿರುವ ಆ ಮುನೀಂದ್ರನಿಗೆ ಪರಿಶುದ್ಧವಾದ ಕಬ್ಬಿನ ಹಾಲನ್ನು ಸಮರ್ಪಿಸಿದನು. ಭಕ್ತಿಯಿಂದರ್ಪಿಸಿದ ಆ ನಿರ್ದುಷ್ಟ ರಸವನ್ನು ಸ್ವಾಮಿ ಪಾನ ಮಾಡಿದನು. ಆಗ ಪಂಚಾಶ್ಚರ್ಯಗಳಾದವು.

ಋಷಭಯೋಗಿಯು ಹಲವು ಸಂವತ್ಸರಗಳವರೆಗೆ ದೇಶಾಟನೆ ಮಾಡುತ್ತಿದ್ದು ಕಡೆಗೆ ಪುರಿಮತಾಳವೆಂಬ ಪಟ್ಟಣದ ಹೊರ ಉದ್ಯಾನದಲ್ಲಿ ಘೋರ ತಪಸ್ಸಿಗೆ ತೊಡಗಿದನು.

## ಕೇವಲ ಜ್ಞಾನೋತ್ಪತ್ತಿ

ಹೀಗೆ ತಪೋನಿರತನಾಗಿರಲು ಋಷಭಯೋಗಿಯು ಕರ್ಮಬೀಜವೆಲ್ಲ

ಸುಟ್ಟುಹೋಯಿತು. ಹುಟ್ಟುಸಾವಿನ ಚಕ್ರಕ್ಕೆ ಆತನನ್ನು ಬಿಗಿದಿದ್ದ ಬಂಧನವೆಲ್ಲ ಬಿಚ್ಚಿಹೋಗಿ ಆತ್ಮ ಮುಕ್ತವಾಯಿತು. ಆ ಮುಕ್ತಾತ್ಮನಿಗೆ ಕೇವಲಜ್ಞಾನವೆಂಬ ಸರ್ವೋತ್ಕೃಷ್ಟವಾದ ಜ್ಞಾನ ಉಂಟಾಯಿತು. ಋಷಭಯೋಗಿ ಜಿನನಾದನು, ತೀರ್ಥಂಕರನಾದನು.

ಕೇವಲ ಜ್ಞಾನೋತ್ಪತ್ತಿಯಾದಾಗ ದೇವತೆಗಳು ಬಂದು ಆನಂದ ನೃತ್ಯ ಮಾಡಿ ಉತ್ಸವವನ್ನಾಚರಿಸಿದರು. ಇಂದ್ರನ ಆಜ್ಞೆಯಂತೆ ಕುಬೇರನು ಜಿನನ ಧರ್ಮಬೋಧೆಗೆ ಅನುಕೂಲಿಸುವ ಸಮವಸರಣ ಮಂಟಪವನ್ನು ನಿರ್ಮಿಸಿದನು. ಅದರಲ್ಲಿ ದೇವಾಸುರನರರು ಮಾತ್ರವೇ ಅಲ್ಲ, ಪಶು ಪಕ್ಷಿ ಮೊದಲಾದ ಸಮಸ್ತ ಪ್ರಾಣಿಗಳಿಗೂ ಎಡೆಯುಂಟು. ಅದು ಆಕಾಶಗಾಮಿಯಾಗಿ ಜಿನನ ಮನಸ್ಸನ್ನನುಸರಿಸಿ ಎಲ್ಲೆಂದರಲ್ಲಿ ಸಂಚರಿಸುವುದು. ಆ ಮಂಟಪದಲ್ಲಿ ತೀರ್ಥಂಕರನ ಬೋಧಾಮೃತವನ್ನು ಸವಿಯಲು ಸಮಸ್ತ ಜೀವರಾಶಿಗಳೂ ಬಂದು ನೆರೆದವು.

ಪುರಿಮತಾಳಪುರದರಸು ಭರತನೊತ್ತಿನ ತಮ್ಮ ವೃಷಭಸೇನನೆಂಬವನು ಆದಿ ತೀರ್ಥಂಕರನನ್ನಾರಾಧಿಸಲು ಮಂಗಳದ್ರವ್ಯಸಮೇತನಾಗಿ ಬಂದನು. ಬಂದು ವೃಷಭಸ್ವಾಮಿಯ ಮಂಗಳಮುಖವನ್ನು ಕಂಡನೋ ಇಲ್ಲವೋ, ಆತನಿಗೆ ಪರಮ ವೈರಾಗ್ಯ ತಲೆದೋರಿತು. ಅರ್ಹತ್ಪರಮೇಶ್ವರನ ಸಮಕ್ಷದಲ್ಲಿ ದೀಕ್ಷೆಯಾಂತು ಆತನ ಮೊದಲನೆಯ ಗಣಧರನಾದನು.

## ಚಕ್ರರತ್ನೋತ್ಪತ್ತಿ

ಇತ್ತ ಅಯೋಧ್ಯೆಯಲ್ಲಿ ಭರತರಾಜನು ಆಸ್ಥಾನಮಂಟಪದಲ್ಲಿದ್ದಾಗ ಪುರೋಹಿತನು ಬಂದು ಆದಿನಾಥನಿಗೆ ಕೇವಲಜ್ಞಾನವುಂಟಾದ ಸುದ್ದಿಯನ್ನು ತಿಳಿಸಿದನು. ಆಯುಧಾಗಾರದಲ್ಲಿ ಸೂರ್ಯನಂತೆ ಕಳೆಯೆರಚುವ ಚಕ್ರರತ್ನವುದ್ಭವಿಸಿತೆಂದು ಆಯುಧಾಧ್ಯಕ್ಷನು ಬಿನ್ನವಿಸಿದನು. ಅಂತಃಪುರದಲ್ಲಿ ಪಟ್ಟದರಾಣಿ ಸುಕುಮಾರನನ್ನು ಹೆತ್ತಳೆಂದು ಕಂಚುಕಿ ವಿಜ್ಞಾಪಿಸಿಕೊಂಡನು. ಏಕಕಾಲದಲ್ಲಿ ಬಂದ ಈ ಮೂರು ಶುಭ ಸಮಾಚಾರಗಳನ್ನೂ ಕೇಳಿ ಭರತನು ಪರಮಾನಂದಭರಿತನಾದನು.

ಇವುಗಳಲ್ಲಿ ಮೊದಲು ಯಾವ ಶುಭಕ್ಕಾಗಿ ಉತ್ಸವ ನಡಸಬೇಕೆಂದು ಸ್ವಲ್ಪ ಹೊತ್ತು ಯೋಚಿಸಿದನು. 'ಧರ್ಮ, ಅರ್ಥ, ಕಾಮ,—ಎಂಬ ಪುರುಷಾರ್ಥಗಳಲ್ಲಿ ಧರ್ಮವೇ ಮುಖ್ಯ. ಧರ್ಮದ ಫಲ ಅರ್ಥ. ಕಾಮ ಆ ಫಲದ ರಸ. ಆದ್ದರಿಂದ ಅರ್ಹತ್ಪರಮೇಶ್ವರನ ಪೂಜೆಯೇ ಪ್ರಥಮ ಕರ್ತವ್ಯ' ಎಂದು ನಿಶ್ಚಯಿಸಿದನು. ಬಳಿಕ ಅಂತಃಪುರ ಪರಿವಾರ ಸಮೇತನಾಗಿ ಸಮವಸರಣ ಮಂಟಪದೆಡೆಗೆ ಪ್ರಯಾಣ ಮಾಡಿದನು.

## ಧರ್ಮಾಮೃತ ವರ್ಷ

ಸಮಸ್ತ ರಾಜಚಿಹ್ನೆಗಳನ್ನೂ ದೂರದಲ್ಲೇ ಬಿಟ್ಟು ಕಾಲ್ನಡಗೆಯಿಂದಲೆ ಅರ್ಹನ ಅಡಿದಾವರೆಗಳೆಡೆಗೆ ನಡೆದನು. ಮೂರು ಸಾರಿ ಪ್ರದಕ್ಷಿಣೆ ಮಾಡಿ ಭಗವಂತನ ಎದುರಿಗೆ ನಿಂತು ಕೈಮುಗಿದು ಭಕ್ತಿಯಿಂದ ಸ್ತೋತ್ರಮಾಡಿ 'ಇಂದ್ರ ಪದವಿಯೇ ಮೊದಲಾದ್ದು ಯಾವುದೂ ಸ್ಥಿರವಲ್ಲ. ಅದೊಂದೂ ನನಗೆ ಬೇಡ. ಉತ್ತಮ ಜ್ಞಾನ ದೊರೆಯುವಂತೆ ಕರುಣಿಸು' ಎಂದು ಪ್ರಾರ್ಥಿಸಿದನು.

ಭರತನ ಪ್ರಾರ್ಥನೆಯನ್ನು ಸಾರ್ಥಕಪಡಿಸಲೋ ಎಂಬಂತೆ ಆದಿ ತೀರ್ಥಂಕರನು ದಿವ್ಯಧ್ವನಿಯಲ್ಲಿ ಧರ್ಮೋಪದೇಶ ಮಾಡತೊಡಗಿದನು. ಆ ಉಪದೇಶ ಸಭೆಯಲ್ಲಿದ್ದ ಸಮಸ್ತರಿಗೂ ಅವರವರ ಭಾಷೆಯಲ್ಲೇ ಅರ್ಥವಾಗುತ್ತಿತ್ತು. ಲೋಕದ ಸ್ವರೂಪ, ತತ್ತ್ವವಿವೇಚನೆ, ಮುಕ್ತಿಸಾಧನೆಯ ವಿಧಾನ–ಎಲ್ಲವೂ ಆ ಬೋಧನೆಯಿಂದ ಸ್ಪಷ್ಟವಾಯಿತು.

ಅಲ್ಲಿ ನೆರೆದ ಎಷ್ಟೋ ಜನರು - ಅರಸುಗಳೂ, ಸಾಧಾರಣರೂ, ಗಂಡಸರೂ, ಹೆಂಗಸರೂ—ಆದಿಜಿನನ ಸನ್ನಿಧಿಯಲ್ಲಿ ದೀಕ್ಷೆ ತೆಗೆದುಕೊಂಡರು. ಬ್ರಹ್ಮಿ ಸೌಂದರಿಯರು ವೈರಾಗ್ಯಕ್ಕೆ ಮನಸ್ಸು ಕೊಟ್ಟರು. ವಿವಾಹವನ್ನೊಲ್ಲದೆ ಗುರುಪ್ರಸಾದದಿಂದ ದೀಕ್ಷೆತಾಳಿ ಗಣಿನೀ ಗಣಕ್ಕೆ ಮುಖ್ಯೆಯರಾದರು. ಭರತ ಬಾಹುಬಲಿಗಳು ಭಗವಂತನನ್ನು ವಂದಿಸಿ ತಮ್ಮ ತಮ್ಮ ರಾಜಧಾನಿಗಳಿಗೆ ಹೋದರು.

ಆದಿತೀರ್ಥಂಕರನು ಸಮವಸರಣ ಮಂಟಪದಲ್ಲಿ ನೆಲಸಿ ಶಕ, ಕಾಶ್ಮೀರ, ಆಂಧ್ರ, ಕರ್ನಾಟಕ, ಮಗಧ ಮೊದಲಾದ ದೇಶಗಳಲ್ಲಿ ಸಂಚರಿಸಿ ಅಲ್ಲಲ್ಲ

ಧರ್ಮಾಮೃತ ವರ್ಷವನ್ನೆರೆದು ಲೋಕವನ್ನು ಧನ್ಯನಾಗಿ ಮಾಡಿದನು. ಕಡೆಗೆ ಕೈಲಾಸ ಪರ್ವತದಲ್ಲಿ ನೆಲಸಿದನು.

## ಭರತನ ದಿಗ್ವಿಜಯ ಪ್ರಯಾಣ

ಸಮವಸರಣದಿಂದ ರಾಜಧಾನಿಗೆ ಹಿಂದಿರುಗಿದ ಭರತರಾಜನು ಆಯುಧಾಗಾರಕ್ಕೆ ಹೋಗಿ ಚಕ್ರಪೂಜೆಯನ್ನು ನೆರವೇರಿಸಿದನು. ಆ ಚಕ್ರ ರತ್ನದ ಜೊತೆಯಲ್ಲಿ ಇನ್ನೂ *ಹದಿಮೂರು ಇತರ ರತ್ನಗಳಿಗೂ ಪೂಜೆ ಮಾಡಿದನು. ಬಳಿಕ ಅರಮನೆಗೆ ಬಂದು ಹಿರಿಯ ಮಗನಿಗೆ ಜಾತಕರ್ಮೋತ್ಸವವನ್ನು ನೆರವೇರಿಸಿದನು.

ಯಾರ ಆಯುಧಾಗಾರದಲ್ಲಿ ಚಕ್ರರತ್ನವುದ್ಭವಿಸುವುದೋ ಆ ರಾಜನೇ ಚಕ್ರವರ್ತಿಯಾಗತಕ್ಕವನು. ಈ ಅವಸರ್ಪಿಣಿಯಲ್ಲಿ ಭರತನೇ ಆದಿಚಕ್ರವರ್ತಿ. ಲೋಕದ ದೊರೆಗಳನ್ನೆಲ್ಲ ಅಡಿಗೆರಗಿಸಿದಲ್ಲದೆ ಯಾರೂ ಚಕ್ರವರ್ತಿಯಾಗುವ ಹಾಗಿಲ್ಲ. ಆದ್ದರಿಂದ ಭರತನು ದಿಗ್ವಿಜಯಕ್ಕೆ ಸನ್ನಾಹಮಾಡ ತೊಡಗಿದನು.

ಅಷ್ಟರಲ್ಲಿ ಶರತ್ಕಾಲ ಬಂತು. ಅದು ವಿಜಯಯಾತ್ರೆಗೆ ಸರಿಯಾದ ಕಾಲ. ಪುರೋಹಿತನು ವಿಜಯಪ್ರಯಾಣಕ್ಕೆ ಶುಭ ಮುಹೂರ್ತವನ್ನು ಗೊತ್ತುಮಾಡಿದನು. ರಾಜಾಜ್ಞೆಯಿಂದ ದಿಗ್ವಿಜಯ ಪ್ರಯಾಣ ಸೂಚನೆಯ ಭೇರಿಯನ್ನು ಹೊಡೆಯಿಸಿದರು.

ಚತುರಂಗ ಸೈನ್ಯ ನೆರೆಯಿತು. ಸರ್ವಾಲಂಕಾರ ಭೂಷಿತನಾದ ಭರತ ರಾಜನು ಪುರೋಹಿತನ ಆಶೀರ್ವಾದಗಳನ್ನಾಲಿಸುತ್ತ ನಿಂತಿರಲು ಅಜಿತಂಜಯವೆಂಬ ಆತನ ವಿಜಯರಥ ಸಜ್ಜಾಗಿ ಬಂತು. ಮೌಹೂರ್ತಿಕರು, 'ದೇವಾ, ವಿಜಯಪ್ರಸ್ಥಾನ ಲಗ್ನ ಹತ್ತಿರ ಬಂತು' ಎಂದು ವಿಜ್ಞಾಪಿಸಿದರು. ದುಂದುಭಿಗಳ ಘೋಷ ದಿಕ್ಕುಗಳ ಕೊನೆಮುಟ್ಟಿತು; ಮಂಗಳಗೀತಗಳ ಇನಿದನಿ ವಾದ್ಯಗಳ ನಾದದೊಡನೆ ಬೆರೆಯಿತು. ಗುರುಜನರು ನಾನಾವಿಧವಾಗಿ

---

* ಛತ್ರರತ್ನ, ಖಡ್ಗರತ್ನ, ದಂಡರತ್ನ, ಚರ್ಮರತ್ನ, ಮಣಿರತ್ನ, ಕಾಕಿಣೀ ರತ್ನ, ಗೃಹಪತಿರತ್ನ, ಸೇನಾನಿರತ್ನ, ತಕ್ಷಕ ರತ್ನ, ಪುರೋಹಿತರತ್ನ, ಹಸ್ತಿರತ್ನ, ತುರಗರತ್ನ, ಸ್ತ್ರೀರತ್ನ. ಇಲ್ಲೆಲ್ಲ 'ರತ್ನ' ಎಂದರೆ ಅತ್ಯಂತ ಶ್ರೇಷ್ಠವಾದ್ದು ಎಂದು ಅಭಿಪ್ರಾಯ.

ಆಶೀರ್ವಾದ ಮಾಡುತ್ತ ಅಕ್ಷತೆಯೆರಚಿದರು. ವಂದಿಗಳು ಗಂಭೀರ ಧ್ವನಿಯಿಂದ ರಾಜನ ಗುಣಗಾನ ಮಾಡತೊಡಗಿದರು. ಈ ಮಂಗಳ ಧ್ವನಿಗಳ ನಡುವೆ ಚಕ್ರವರ್ತಿಯು ರಥವನ್ನೇರಿ ವಿಜಯಪ್ರಯಾಣ ಬೆಳಸಿದನು. ಅಂದು ಅಯೋಧ್ಯಾ ಪಟ್ಟಣದ ಹತ್ತಿರವೇ ಸಿದ್ಧಪಡಿಸಿದ್ದ 'ವಿಜಯ ಪ್ರಸ್ಥಾನ ಶಿಬಿರ'ದಲ್ಲಿ ತಂಗಿದನು.

## ಪೂರ್ವ ದಿಗ್ವಿಜಯ

ಮರುದಿನ ಚಕ್ರವರ್ತಿಯ ಸೇನೆ ಪೂರ್ವಾಭಿಮುಖವಾಗಿ ಪ್ರಯಾಣ ಮಾಡಿತು. ನೆಲ, ಆಕಾಶ, ದಿಕ್ಕುಗಳನ್ನೆಲ್ಲ ಬೆಳಗಿ ಸೂರ್ಯನಂತೆ ಪ್ರಜ್ವಲಿಸುತ್ತ ಚಕ್ರರತ್ನ ಮುಂದೆ ನಡೆಯಿತು. ಅದರ ಜೊತೆಯಲ್ಲೆ ಪಡೆಗೆ ಅಡ್ಡ ಬಂದ ಬೆಟ್ಟಗುಡ್ಡಗಳನ್ನು ಕಡಿದು ದಾರಿ ಬಿಡಿಸಿ ಮಟ್ಟಮಾಡುತ್ತ ದಂಡರತ್ನ ನಡೆಯಿತು. ದಂಡರತ್ನದ ಹಿಂದೆ ಆನೆ, ಕುದುರೆ, ತೇರು, ಕಾಲಾಳೆಂಬ ನಾಲ್ಕುಬಗೆಯ ಸೈನ್ಯವೂ ಪಡೆವಳನ ಸನ್ನೆಯಲ್ಲಿ ಶಿಸ್ತಿನಿಂದ ಮುಂದುವರಿಯಿತು. ಚಕ್ರವರ್ತಿಯ ಚತುರಂಗ ಸೈನ್ಯದ ಜೊತೆಗೆ ದಿವಿಜ ಖೇಚರ ಸೈನ್ಯಗಳೂ ಸೇರಿದವು ಈ ಷಡಂಗಬಲ ಭೂವ್ಯಾಕಾಶಗಳನ್ನೆಲ್ಲ ತುಂಬಿತು.

ಆ ದೊಡ್ಡ ಪಡೆ ಗಂಗಾನದಿಯ ದಡದಲ್ಲಿ ಎರಡನೆಯ ಗಂಗೆಯೆಂಬಂತೆ ನಡೆಯುತ್ತಿರಲು ಗಡಿನಾಡುಗಳ ರಾಜರೂ ಹೊರನಾಡುಗಳ ದೊರೆಗಳೂ ಕಪ್ಪಕಾಣಿಕೆಗಳನ್ನು ತಂದೊಪ್ಪಿಸಿದರು. ಮಹಾ ಪರಾಕ್ರಮಿಗಳೆಂದು ಹೆಸರು ಹೊಂದಿದ ವಿಕ್ರಮಶಾಲಿಗಳೆಲ್ಲ ದಂಡಕ್ಕೆ ಭಯಪಟ್ಟು ಚಕ್ರವರ್ತಿಗೆ ತಲೆ ಬಾಗಿಸಿದರು. ಆ ವಿಜಯ ಸೈನ್ಯಕ್ಕೆ ಎದುರಿಲ್ಲವಾಯಿತು. ನಿರಾತಂಕವಾಗಿ ಮುಂದುವರಿಯುತ್ತ ಪೂರ್ವ ಸಮುದ್ರದ ತೀರವನ್ನು ಸೇರಿ ಪಡೆ ಗಂಗಾ ದ್ವಾರದಲ್ಲಿ ಬೀಡುಬಿಟ್ಟಿತು.

ಸಮುದ್ರತೀರದ ದೇಶಾಧಿಪತಿಗಳೆಲ್ಲ ಭರತ ಚಕ್ರವರ್ತಿಯ ಬರವನ್ನು ಕೇಳಿ ಭಯಭ್ರಾಂತರಾದರು. ತಮ್ಮ ಬಲದರ್ಪವನ್ನು ಬಿಟ್ಟುಡುಗಿ ಶರಣಾಗತರಾದರು. ಚಕ್ರವರ್ತಿ ಅವರನ್ನೆಲ್ಲ ಅನುಗ್ರಹಿಸಿ ಉಚಿತ ರೀತಿಯಲ್ಲಿ ಮನ್ನಿಸಿದನು.

## ಮಾಗಧ ಗರ್ವಭಂಗ

ಪೂರ್ವ ಸಮುದ್ರ ಮಧ್ಯದಲ್ಲಿ ಮಾಗಧನೆಂಬೊಬ್ಬ ವ್ಯಂತರದೇವತೆ

ಆಳುತ್ತಿದ್ದನು. ಅವನನ್ನು ಜಯಿಸಹೊರಟ ಚಕ್ರವರ್ತಿಯನ್ನು ಕಡಲಡ್ಡ ಗಟ್ಟಿತು. ಏಾರಿ ಮುನ್ನುಗ್ಗುವೆನೆಂದು ಯತ್ನಿಸಿದ ಆತನಿಗೆ ಪುರೋಹಿತನೂ ಕುಲವೃದ್ಧರೂ ಹಿತೋಪದೇಶ ಮಾಡಿದರು. ಅದರಂತೆ ಗಂಗಾಸಾಗರ ಸಂಗಮದಲ್ಲಿ ದರ್ಭೆಯ ಮೇಲೆ ಮಲಗಿ ಭರತೇಶ್ವರನು ಮೂರು ದಿನಗಳ ವರೆಗೆ ಉಪವಾಸವ್ರತವನ್ನಾಚರಿಸಿದನು. ಪುರೋಹಿತನು ಜಿನಪೂಜೆಯನ್ನೂ ಶಾಂತಿಕ್ರಿಯೆಗಳನ್ನೂ ನೆರವೇರಿಸಿದನು. ನಾಲ್ಕನೆಯ ದಿನ ಬೆಳಗ್ಗೆ ಭರತ ರಾಜನು ಮಂಗಳಾಲಂಕಾರ ಮಾಡಿಕೊಂಡು ದಿವ್ಯಾಸ್ತ್ರಗಳನ್ನು ಧರಿಸಿದನು. ನೀರಿನಲ್ಲೂ ನೆಲದಲ್ಲೂ ತಡೆಯಿಲ್ಲದೆ ನಡೆಯುವ ಕುದುರೆಗಳನ್ನು ಹೂಡಿದ ರಥವನ್ನು ಸಾರಥಿ ತಂದು ನಿಲ್ಲಿಸಿದನು. ಅದನ್ನೇರಿ ಆ ಮಹಾಮಹಿಮನು ಗಂಗಾ ದ್ವಾರದಿಂದ ಲವಣ ಸಮುದ್ರವನ್ನು ಪ್ರವೇಶಮಾಡಿದನು.

ಕುದುರೆಗಳ ಗೊರಸು ಮುಳುಗಲಿಲ್ಲ. ಚಕ್ರ ಕೆಳಗಿಳಿಯಲಿಲ್ಲ. ಚಕ್ರದ ಚೀತ್ಕಾರವೂ ನಿಲ್ಲಲಿಲ್ಲ. ನೆಲದ ಮೇಲೆ ಹೇಗೋ ಹಾಗೆ ಅತಿ ಸುಲಲಿತ ವಾಗಿ ನೀರಿನ ಮೇಲೂ ತೇರು ನಡೆಯುತ್ತಿತ್ತು. ಹೀಗೆ ಹನ್ನೆರಡು ಯೋಜನ ನಡೆದು ತಟಕ್ಕನೆ ರಥ ನಿಂತುಬಿಟ್ಟಿತು.

ಭರತನಿಗೆ ಕೋಪವುಕ್ಕಿತು. ವಜ್ರಕಾಂಡವೆಂಬ ಬಿಲ್ಲನ್ನು ಕೈಗೆತ್ತಿ ಕೊಂಡು ಹೆದೆಯೇರಿಸಿದನು ; ಅಮೋಘ ಬಾಣವನ್ನು ಹೂಡಿದನು. ಆ ಬಾಣದಲ್ಲಿ, "ಪುರು ಪರಮೇಶ್ವರ ಪುತ್ರನಾದ ಭರತ ಚಕ್ರವರ್ತಿ ಬಂದಿದ್ದಾನೆ. ಎಲ್ಲ ಭೂನಿವಾಸಿಗಳೂ ವ್ಯಂತರಾಮರರೂ ತಲೆ ತಗ್ಗಿಸಿಕೊಂಡು ಬಂದು ಕಾಣಬೇಕು" ಎಂಬ ಲೇಖನವನ್ನಿಟ್ಟನು. ಇಟ್ಟು ಅಲ್ಲಿಂದಲೇ ಮಾಗ ಧಾಮರನ ಮೇಲೆ ಪ್ರಯೋಗಿಸಿದನು.

ಬಾಣ ನೇರವಾಗಿ ಮಾಗಧನ ಸಭೆಗೆ ಹೋಗಿ ಬಿದ್ದಿತು. ಆ ಲೇಖನ ವನ್ನೋದಿಸಿ ಕೇಳಿ ಮಾಗಧನು ಕೆರಳಿದನು. "ತನ್ನ ಕುಲದ ಚಲದ ಅಗ್ಗಳಿಕೆ ಕೆಡುವಂತೆ ಮತ್ತೊಬ್ಬನಿಗೆ ತಲೆಬಾಗಿ ಬಾಳುವವನು ಬದುಕಿದ್ದರೂ ಸತ್ತಂತೆಯೇ ಸರಿ" ಎಂದು ನುಡಿದನು. ಅಂಥ ಹೇಡಿಯಾಗಲು ಹೇಸಿ ಕದನಕಾತರನಾಗಿ ಗರ್ಜಿಸಿದನು.

ಕುಲವೃದ್ಧರು ಅವನಿಗೆ ಸಮಾಧಾನ ಹೇಳಿದರು: "ಈ ಅಭಿಮಾನ ವೇನೋ ಒಳ್ಳೆಯದು. ಆದರೆ ಯಾರೊಬ್ಬರೂ ತಾನೇ ಸರ್ವಶ್ರೇಷ್ಠನೆಂದು

ಭಾವಿಸಬಾರದು. ದೊಡ್ಡವರಿಗೂ ದೊಡ್ಡವರಿದ್ದೇ ಇರುವರು. ಈತ ಸಾಮಾನ್ಯನಲ್ಲ; ಚಕ್ರವರ್ತಿ. ಬಲಸ್ಥನೊಡನೆ ಕಾಳಗ ಸಲ್ಲದು. ಆದ ರಿಂದ ಸಾಮವೇ ಸರಿ" ಎಂದು ತಿಳಿಯಹೇಳಿದರು. ೮

ಮಾಗಧಾಮರನು ನಿಜವನ್ನರಿತು ಗರ್ವವುಡುಗಿ ಭರತೇಶನನ್ನು ಬಂದು ಕಂಡನು. ಕೈಗಾಣಿಕೆಗಳನ್ನು ಸಮರ್ಪಿಸಿ ಆತನಿಗೆ ಅಧೀನನಾದನು. ಭರತನೂ ಮಾಗಧನನ್ನು ಉಚಿತ ಮರ್ಯಾದೆಗಳಿಂದ ಸಂತೋಷಪಡಿಸಿದನು.

## ವಿಜಯಾರ್ಧ ಪರ್ವತವನ್ನು ದಾಟಿದ್ದು

ಮಾಗಧನನ್ನು ಜಯಿಸಿ ಮರಳಿದ ಭರತೇಶನು ದಕ್ಷಿಣಮುಖವಾಗಿ ತಿರುಗಿ ನಾನಾ ದೇಶಗಳನ್ನು ಗೆಲ್ಲುತ್ತ ಮುಂಬರಿದನು. ದಕ್ಷಿಣ ಪಶ್ಚಿಮ ಸಮುದ್ರಗಳ ನಡುಗಡ್ಡೆಗಳಲ್ಲಿದ್ದ ವರತನು ಪ್ರಭಾಸಾಮರರನ್ನೂ ಮಾಗಧ ನನ್ನು ಗೆದ್ದ ರೀತಿಯಲ್ಲಿ ಅಡಿಗೆರಗಿಸಿಕೊಂಡನು. ಬಳಿಕ ಸಿಂಧೂನದಿಯನ್ನನು ಸರಿಸಿ ಉತ್ತರಾಭಿಮುಖವಾಗಿ ನಡೆದು ವಿಜಯಾರ್ಧ ಪರ್ವತದ ತಪ್ಪಲಿಗೆ ಬಂದು ಸೇರಿದನು. * ವಿಜಯಾರ್ಧ ಕುಮಾರನು ಚಕ್ರವರ್ತಿಯನ್ನಾದರಿಸಿ ಅಭಿಷೇಕ ಮಾಡಿದನು.

ಭರತವರ್ಷದ ನಟ್ಟನಡುವೆ ಪೂರ್ವ ಪಶ್ಚಿಮ ಸಮುದ್ರಗಳವರೆಗೂ ಹಬ್ಬಿ ಅದನ್ನು ಉತ್ತರ ದಕ್ಷಿಣ ಭಾಗಗಳಾಗಿ ವಿಂಗಡಿಸುವುದು ಆ ವಿಜ ಯಾರ್ಧ ಪರ್ವತ. ಅಲ್ಲಿ ಬೀಡು ಬಿಟ್ಟಿದ್ದಾಗ ಗಂಗಾ ಸಿಂಧೂನದಿಗಳ ಮಧ್ಯ ಪ್ರದೇಶದ ರಾಜರೆಲ್ಲ ಭರತನನ್ನು ಬಂದು ಕೂಡಿಕೊಂಡರು. ವೃಷಭದೇವ ನಲ್ಲಿದ್ದ ಗೌರವದಿಂದಲೂ ತಮ್ಮ ನಣ್ಪಿನಿಂದಲೂ ಭರತನಿಗೆ ಅಧೀನರಾದರು.

ದಕ್ಷಿಣ ಭರತವನ್ನೆಲ್ಲ ಗೆದ್ದಮೇಲೆ ಭರತನ ದೃಷ್ಟಿ ಉತ್ತರಕ್ಕೆ ಹೊರ ಳಿತು. ಆದರೆ ವಿಜಯಾರ್ಧ ಪರ್ವತವನ್ನು ದಾಟುವುದಸಾಧ್ಯ. 'ತಮಿಸ್ರ ಗುಹೆ' ಯೆಂಬ ಒಂದು ಗುಹೆಯೊಳಗೆ ನುಗ್ಗಿ ನಡೆದು ಉತ್ತರಕ್ಕೆ ಹೋಗ ಬೇಕು. ಆ ಗುಹೆಯ ಬಾಗಿಲು ಅಭೇದ್ಯವಾದ ವಜ್ರದರೆಗಳಿಂದ ಮುಚ್ಚಿ ಬಿಟ್ಟಿದೆ. ಏನು ಮಾಡುವುದೆಂದು ಯೋಚಿಸುತ್ತಿರುವಷ್ಟರಲ್ಲಿ ಅಲ್ಲಿನವನಾದ

---

* ಆ ಪರ್ವತದ ಅಭಿಮಾನಿದೇವತೆ.

ಕೃತಮಾಲನೆಂಬ ಅಸುರನೊಬ್ಬನು ಬಂದು ಆ ಗವಿಯ ಬಾಗಿಲು ತೆರೆಯುವ ಗುಟ್ಟನ್ನು ತಿಳಿಸಿ ಕೊಟ್ಟನು.

ಚಕ್ರವರ್ತಿಯು ಅದನ್ನೆಲ್ಲ ಸೇನಾಪತಿಗೆ ತಿಳಿಯ ಹೇಳಿದನು. ಆತನು ತುರಂಗ ರತ್ನವನ್ನೇರಿ ನಡೆದು ವಜ್ರಕವಾಟವನ್ನು ದಂಡರತ್ನದಿಂದ ಗಟ್ಟಿಯಾಗಿ ಬಡಿದನು. ತಕ್ಷಣ ಬೆಟ್ಟ ಬಿರಿದು ಬಾಯ್ಬಿಡುವುದೋ ಎಂಬಂತೆ, ನೆಲ ನೊಂದು ನರಳುವುದೋ ಎಂಬಂತೆ, ಅದ್ಭುತವಾದ ಅಬ್ಬರ ಕೇಳ ಬಂತು. ವಜ್ರದರೆಗಳು ಪಕ್ಕಕ್ಕೆ ಸರಿದು ನಿಲ್ಲಲು ಒಳಗಿನಿಂದ ಬೆಂಕಿಯುರಿ ಭುಗಿಲೆಂದು ಹೊರಹೊಮ್ಮಿತು. ಅಶ್ವರತ್ನ ಒಂದೇ ಹಾರಿಗೆ ಹನ್ನೆರಡು ಯೋಜನ ಹಾರಿ ದೂರ ಸರಿಯಿತು.

ಆ ಬಳಿಕ ಸೇನಾಪತಿಯು ಪಶ್ಚಿಮ ಮ್ಲೇಚ್ಛಖಂಡದ ಮೇಲೆ ದಂಡೆತ್ತಿ ನಡೆದನು. ಆ ಖಂಡವನ್ನೆಲ್ಲ ಮೂರು ಸಾರಿ ಬಳಸಿ ಅಲ್ಲಿನ ರಾಜಾಧಿರಾಜರನ್ನೆಲ್ಲ ಗೆದ್ದು, ಮುಖ್ಯರಾದವರನ್ನು ಮುಂದಿಟ್ಟುಕೊಂಡು ಭರತಚಕ್ರವರ್ತಿಯ ಸನ್ನಿಧಿಗೆ ಕರೆತಂದನು. ಅಷ್ಟರಲ್ಲಿ ಆರು ತಿಂಗಳು ಕಳೆಯಿತು. ಗುಹೆಯ ಬೆಂಕಿಯೂ ಆರಿತ್ತು.

ತಮಿಸ್ರಗುಹೆ ಹನ್ನೆರಡು ಯೋಜನ ಅಗಲವಾಗಿ ಎಂಟು ಯೋಜನ ಎತ್ತರವಾಗಿ ಕತ್ತಲೆ ತುಂಬಿ ಬಹು ಭಯಂಕರವಾಗಿತ್ತು. ಅದರ ನಡುವೆ ಸಿಂಧೂನದಿ ಅಂತರ್ಗಾಮಿಯಾಗಿ ಹರಿಯುತ್ತಿತ್ತು. ಭರತ ಚಕ್ರವರ್ತಿ ಅದರ ಬಾಗಿಲ ಬಳಿ ತಕ್ಕ ಕಾಪನ್ನೇರ್ಪಡಿಸಿ ಪಡೆ ಮುನ್ನುಗ್ಗಲೆಂದು ಅಪ್ಪಣೆಮಾಡಿದನು. ಒಳಗಿನ ಕಗ್ಗತ್ತಲೆಯನ್ನು ಕಂಡು ಪಡೆ ನಡುಗಿ ಹಿಂಜರಿಯಿತು. ಆಗ ಪುರೋಹಿತನು ಗವಿಯ ಇಕ್ಕೆಲದ ಗೋಡೆಗಳಲ್ಲೂ ಕಾಕಿಣೀ ರತ್ನಗಳನ್ನು ಮೆಟ್ಟಿಸಿ ಸೂರ್ಯ ಚಂದ್ರಮಂಡಲಗಳನ್ನು ಯೋಜನಕ್ಕೊಂದರಂತೆ ರಚಿಸಿದನು. ಅವುಗಳ ಬೆಳಕಿನಲ್ಲಿಯೂ ಚಕ್ರರತ್ನದ ಉಜ್ವಲ ಕಾಂತಿಯಲ್ಲಿಯೂ ಕತ್ತಲೆಯೆಲ್ಲ ಕರಗಿ ಹೋಯಿತು. ಸೇನೆ ನಿರಾತಂಕವಾಗಿ ಗವಿಯನ್ನು ಪ್ರವೇಶಿಸಿ ಎರಡಾಗಿ ಒಡೆದು ಸಿಂಧೂನದಿಯ ಇಕ್ಕೆಲಗಳಲ್ಲೂ ಮುಂದುವರಿಯ ತೊಡಗಿತು.

ಗುಹೆಯಲ್ಲಿ ಅರ್ಧದಷ್ಟು ದೂರ ಸಾಗಿದ ಮೇಲೆ ಮತ್ತೊಂದು ತೊಂದರೆ ಅಡ್ಡಬಂತು. ಗುಹೆಯ ಗೋಡೆಯ ಎರಡು ಕಡೆಗಳಿಂದಲೂ ಎರಡು ನದಿ

ಗಳು ಹರಿದು ಬಂದು ಸಿಂಧುವಿಗೆ ಕೂಡುತ್ತ ದಾರಿಯನ್ನು ಕಟ್ಟಿಬಿಟ್ಟವೆ. ಒಂದರ ನೀರು ತಳದ ಮರಳನ್ನೂ ಹೊತ್ತು ಮೇಲಕ್ಕೆ ನೆಗೆಯುವುದು ; ಇನ್ನೊಂದರ ನೀರು ಚೂರು ಚೆಂಡು ಬಿದ್ದರೂ ಅದನ್ನು ತಳಕ್ಕೆ ಮುಳುಗಿಸಿ ಬಿಡುವುದು. ಈ ವಿಚಿತ್ರದ ಹೊಳೆಗಳನ್ನು ಹಾಯುವುದು ಹೇಗೆಂದು ಬಗೆ ಹರಿಯಲಿಲ್ಲ. ಚಕ್ರವರ್ತಿ ಸ್ಥಪತಿರತ್ನನಿಗೆ ಹೇಳಿಕಳಿಸಿದನು. ಆತ ಬಂದು ಚೆನ್ನಾಗಿ ಪರೀಕ್ಷಿಸಿ ಗಾಳಿಯ ವಿಚಿತ್ರ ಗತಿಯಿಂದ ಅಂಥ ವೈಚಿತ್ರ್ಯವುಂಟಾಗಿದೆ ಯೆಂದರಿತು ಬಿನ್ನಯಿಸಿದನು. ಬಳಿಕ ಅಮಾನುಷಾರಣ್ಯಗಳಿಂದ ಮರ ಗಳನ್ನು ತರಿಸಿ ನದಿಗಳಿಗೆ ಸೇತುವೆ ಕಟ್ಟಿದನು.

ಸೇನೆ ಸೇತುವೆಯ ಮೇಲೆ ಸರಾಗವಾಗಿ ನಡೆಯಿತು. ತಮಿಸ್ರ ಗುಹೆಯ ಉತ್ತರ ದ್ವಾರವನ್ನು ಅನಾಯಾಸವಾಗಿ ತೆಗೆದು ಚಕ್ರವರ್ತಿ ಉತ್ತರ ಭರತಕ್ಕೆ ಪ್ರವೇಶ ಮಾಡಿದನು.

## ಉತ್ತರ ಭರತ ವಿಜಯ

ಮೊದಲು ಸಿಂಧೂನದಿಯ ಪಶ್ಚಿಮ ಖಂಡವನ್ನು ಮುತ್ತಿ ಅಲ್ಲಿನ ದೊರೆ ಗಳನ್ನೆಲ್ಲ ಸೇನಾಪತಿಯೇ ಗೆದ್ದು ಬಂದನು. ತರುವಾಯ ಭರತ ಚಕ್ರೇ ಶ್ವರನು ಮಧ್ಯಮ ಖಂಡಕ್ಕೆ ನುಗ್ಗಿದನು. ಅಲ್ಲಿ ಬಳಾಕಾವರ್ತರೆಂಬ ಇಬ್ಬರು ಮ್ಲೇಚ್ಛರಾಜರು ಮಲೆತು ನಿಂತರು. ತಮ್ಮ ಬಲಗಳನ್ನೊಂದುಗೂಡಿಸಿ ಚಕ್ರ ವರ್ತಿಯನ್ನು ಲೆಕ್ಕಿಸದೆ ಯುದ್ಧಕ್ಕೆ ಸಿದ್ಧರಾದರು. ಅವರ ಮಂತ್ರಿಗಳು ಆಲೋಚನೆ ಮಾಡಿ, "ಈತನು ವಿಜಯಾರ್ಧ ಪರ್ವತವನ್ನು ದಾಟಿ ಬಂದಿರು ವುದರಿಂದ ಮಹಾಮಹಿಮನೇ ಆಗಿರಬೇಕು. ಈತನೊಡನೆ ಎದುರು ನಿಂತು ಕಾದುವುದು ಉಚಿತವಲ್ಲ. ಗಹನವಾದ ನಮ್ಮ ದುರ್ಗಗಳಲ್ಲಿ ನೆಲೆ ನಿಂತು ಈತನ ಸೈನ್ಯಕ್ಕೆ ಕಿರುಕುಳ ಕೊಡೋಣ. ನಮ್ಮ ದುರ್ಗಗಳ ಮೇಲೆ ದಂಡು ನುಗ್ಗಿಸಿದರೆ ಅದರ ಆಟ ಸಾಗದು" ಎಂದು ಸಲಹೆ ಹೇಳಿದರು. ಬಳಾಕಾ ವರ್ತರು ಅದೇ ನೀತಿಯನ್ನನುಸರಿಸಿದರು.

ದುರ್ಗದ ರಕ್ಷಣೆ ಹೊಂದಿದ ಬಳಾಕಾವರ್ತರು ತಮ್ಮ ಕುಲದೇವತೆ ಗಳಾದ ಮೇಘಮುಖರೆಂಬ ನಾಗದೇವತೆಗಳನ್ನು ಪೂಜಿಸಿ ಪ್ರಾರ್ಥಿಸಿ ಕೊಂಡರು. ಆ ನಾಗದೇವತೆಗಳು ಅದ್ಭುತ ಮೇಘಾಕಾರದಿಂದ ಬಂದು

ಅಪರಿಮಿತವಾಗಿ ಮಳೆ ಸುರಿಸಿದರು. ನೀರು ಸಮುದ್ರದಂತೆ ಉಕ್ಕಿಬಂದು ಸೈನ್ಯವನ್ನು ಕೊಚ್ಚಿಸತೊಡಗಿತು.

ಚಕ್ರವರ್ತಿ ಸೈನ್ಯವನ್ನೆಲ್ಲ ಚರ್ಮರತ್ನದ ಮೇಲೇರಿಸಿದನು ; ಮೇಲೆ ಛತ್ರರತ್ನವನ್ನು ಹಿಡಿಸಿದನು. ಸಾಗರದ ನಡುವೆ ದೊಡ್ಡ ಹಡಗಿನಲ್ಲಿರುವಂತೆ ಚರ್ಮರತ್ನದ ಮೇಲೆ ಸೇನೆ ಸುರಕ್ಷಿತವಾಗಿತ್ತು. ಮೇಲಿನಿಂದ ಒಂದು ತೊಟ್ಟೂ ನೀರು ಬೀಳದಂತೆ ಛತ್ರರತ್ನ ಮರೆಮಾಡಿತು. ಜಯಕುಮಾರ ನೆಂಬ ಮಹಾವೀರನು ಮೇಘಮುಖಾಮರರೊಡನೆ ಕಾಳಗಕ್ಕೆ ನಿಂತನು. ಮೇಘಮುಖರು ಪೆಟ್ಟು ತಿಂದು ನೊಂದರು. ಆದರೂ ಕಾಳಗ ಬೇಗ ಕೊನೆ ಗೊಳ್ಳದಿರಲು ಭರತೇಶ್ವರ ಚಕ್ರವರ್ತಿ ಖಡ್ಗರತ್ನಕ್ಕೆ ಕೈನೀಡಿದನು. ಆಗ ಮೇಘಮುಖರು ಅಂಜಿ ಹಿಂಜರಿದರು. ಬಳಾಕಾವರ್ತರು ಸೊಕ್ಕುಡುಗಿ ಚಕ್ರೇಶನ ಅಡಿಗೆರಗಿದರು.

ಮುಂದೆ ವಿಜಯಿಯಾದ ಭರತೇಶ್ವರನು ಸಿಂಧೂ ಮೂಲಕ್ಕೆ ಹೋಗಿ ಸಿಂಧು ದೇವಿಯಿಂದ ಅಭಿಷಿಕ್ತನಾದನು. ಹಿಮವತ್ಪರ್ವತದ ಮಧ್ಯಮ ಶಿಖರವನ್ನು ತಲುಪಿ ಹಿಮವತ್ಕುಮಾರನಿಂದ ಪೂಜೆಗೊಂಡನು. ಅಲ್ಲಿಂದ ವೃಷಭಾಚಲಕ್ಕೆ ಹೋಗಿ ಸೇರಿದನು. ಅಲ್ಲಿ ತನ್ನ ವಿಜಯ ಪ್ರಶಸ್ತಿಯನ್ನು ಕೆತ್ತಿಸಬೇಕೆಂದು ನಿಶ್ಚಯಿಸಿದನು. ಕೆತ್ತಿಸನೋಡಿದರೆ ಪೂರ್ವ ಚಕ್ರವರ್ತಿಗಳ ಪ್ರಶಸ್ತಿಯಿಂದ ಅಲ್ಲಿನ ಕಲ್ಲುಗಳೆಲ್ಲ ತುಂಬಿಹೋಗಿದ್ದವು. ಮತ್ತಾರ ಪ್ರಶ ಸ್ತಿಗೂ ಎಡೆಯುಳಿದಿರಲಿಲ್ಲ.

ಅದುವರೆಗೂ ಆತನು ತಾನೇ ಮಹಾಶೂರನೆಂದುಕೊಂಡಿದ್ದನು. ಈ ಪ್ರಶಸ್ತಿಗಳನ್ನು ಕಂಡ ಬಳಿಕ ಮಡುಗಟ್ಟಿದ್ದ ಅವನ ಗರ್ವರಸವೆಲ್ಲ ಸೋರಿ ಹೋಯಿತು. ಹೆಮ್ಮೆಯಡಗಿ ನಾಚಿ ತಲೆ ತಗ್ಗಿಸಿದನು. ಆದರೂ ಸ್ವಾಭಿ ಮಾನಕ್ಕೆ ಸಿಕ್ಕಿ ಪೂರ್ವ ಚಕ್ರವರ್ತಿಗಳ ಪ್ರಶಸ್ತಿಗಳಲ್ಲೊಂದನ್ನು ದಂಡರತ್ನ ದಿಂದೊರಸಿ ಹಾಕಿ ಆಯೆಡೆಯಲ್ಲಿ ತನ್ನ ಪ್ರಶಸ್ತಿಯನ್ನು ಬರಸಿದನು.

ಆ ಬಳಿಕ ಸೇನಾ ಸಮೇತನಾಗಿ ಗಂಗಾಕೂಟಕ್ಕೆ ಹೋಗಿ ಸೇರಿದನು. ಗಂಗಾದೇವಿ ಆತನಿಗೆ ತನ್ನ ಮಂಗಳ ಜಲಗಳಿಂದ ಅಭಿಷೇಕ ಮಾಡಿದಳು. ಆಮೇಲೆ ಗಂಗೆಯ ತಡಿವಿಡಿದು ಚಕ್ರವರ್ತಿಯ ಸೈನ್ಯ ದಕ್ಷಿಣಾಭಿಮುಖವಾಗಿ

ಪ್ರಯಾಣ ಮಾಡಿತು. ವಿಜಯಾರ್ಧ ಪರ್ವತದ ಪೂರ್ವದ ಕಡೆ ಇರುವ 'ಕಾಂಡಕ ಪ್ರಪಾತ' ಗುಹೆಯ ಬಳಿ ಬೀಡುಬಿಟ್ಟಿತು. ಸೇನಾಪತಿಯು ಹಿಂದಿನಂತೆಯೇ ಗುಹೆಯ ಬಾಗಿಲನ್ನು ತೆರೆದು ಬೆಂಕಿ ಆರುವ ವರೆಗೂ ಪೂರ್ವ ಮ್ಲೇಚ್ಛ ಖಂಡವನ್ನು ಗೆಲ್ಲಲು ನಡೆದನು.

ಆ ಸಮಯದಲ್ಲಿ ಸಮಸ್ತ ವಿದ್ಯಾಧರ ರಾಜರೂ ನಮಿ ವಿನಮಿಗಳನ್ನು ಮುಂದುಮಾಡಿಕೊಂಡು ಬಂದು ಭರತ ಚಕ್ರವರ್ತಿಯನ್ನು ಕಂಡರು. ನಮಿ ವಿನಮಿಗಳು ತಮ್ಮ * ನಂಟನ್ನು ನೆನೆದು ಭರತನಿಗೆ ತಮ್ಮ ತಂಗಿಯಾದ ಸುಭದ್ರೆಯೆಂಬ ಕನ್ಯಾರತ್ನವನ್ನು ಪರಮ ಸಂಭ್ರಮದಿಂದ ಮದುವೆಮಾಡಿ ಕೊಟ್ಟರು. ಸೇನಾಪತಿಯೂ ಮ್ಲೇಚ್ಛಖಂಡವನ್ನು ಗೆದ್ದು ಬಂದನು.

ದಿಗ್ವಿಜಯ ಪೂರ್ಣವಾಯಿತು. ಚಕ್ರರತ್ನ ಕಾಕಿಣೀರತ್ನಗಳ ಪ್ರಕಾಶ ದಲ್ಲಿ ಸೇನಾಸಮೇತನಾಗಿ ಭರತಚಕ್ರವರ್ತಿಯು 'ಕಾಂಡಕ ಪ್ರಪಾತ' ಗುಹೆಯ ಮಾರ್ಗವಾಗಿ ವಿಜಯಾರ್ಧ ಪರ್ವತವನ್ನು ದಾಟಿ ಬಂದನು. ಅದರ ದಕ್ಷಿಣದಲ್ಲಿರುವ ಕೈಲಾಸ ಪರ್ವತದ ತಪ್ಪಲಲ್ಲಿ ಬೀಡು ಬಿಟ್ಟು ಮತ್ತೊಮ್ಮೆ ವೃಷಭನಾಥನ ದರ್ಶನಮಾಡಿದನು. ಆದಿತೀರ್ಥಂಕರನನ್ನು ಭಕ್ತಿಯಿಂದರ್ಚಿಸಿ, ಸ್ತುತಿಸಿ ಬಳಿಕ ರಾಜಧಾನಿಗೆ ಹಿಂದಿರುಗಿದನು.

## ಚಕ್ರದ ನಡೆಗೆ ತಡೆ

ಷಟ್ಖಂಡ ಭರತ ಮಂಡಲವನ್ನೂ ತನ್ನ ಪರಾಕ್ರಮದಿಂದ ಅಡಿಗೆರಗಿಸಿ ಭರತಚಕ್ರವರ್ತಿ ಹಲವು ಪಯಣಗಳಲ್ಲಿ ಅಯೋಧ್ಯಾ ಪಟ್ಟಣದ ಬಳಿಗೆ ಬಂದನು. ಅಲ್ಲಿಯವರೆಗೂ ಎಲ್ಲಿಯೂ ನಿಲ್ಲದೆ ಹಗೆಗಳನ್ನೆಲ್ಲ ಧ್ವಂಸ ಮಾಡುತ್ತ ನುಗ್ಗುತ್ತಿದ್ದ ಚಕ್ರರತ್ನ ರಾಜಧಾನಿಯ ಬಾಗಿಲಿನಲ್ಲಿ ಅಲುಗದೆ ನಿಂತುಬಿಟ್ಟಿತು. ಪುರಪ್ರವೇಶ ಮಾಡದೆ ಚಕ್ರ ನಡೆಗೆಟ್ಟು ನಿಂತಿತೆಂಬ ಸುದ್ದಿ ಭರತ ಚಕ್ರವರ್ತಿಯ ಕಿವಿ ಮುಟ್ಟಿತು. ಆತನು ಆಶ್ಚರ್ಯಪಟ್ಟು ಪುರೋಹಿತ ನನ್ನು ಕರಸಿ ಕಾರಣವೇನೆಂದು ಕೇಳಿದನು.

---

* ಇವರು ಭರತನ ತಾಯಿ ಯಶಸ್ವತಿಯ ಅಣ್ಣಂದಿರಾದ ಕಚ್ಛ ಮಹಾಕಚ್ಛರ ಮಕ್ಕಳು. ಆದಿತೀರ್ಥಂಕರನ ಸೇವಾ ಮಹಿಮೆಯಿಂದ ಅವರಿಗೆ ವಿದ್ಯಾಧರ ಪದವಿ ಯುಂಟಾಯಿತು.

ಪುರೋಹಿತನು "ದೇವಾ, ನಿನಗೆ ಇನ್ನೂ ಹಗೆಗಳಿರುವರೆಂಬುದನ್ನು ಇದು ಸೂಚಿಸುತ್ತದೆ" ಎಂದು ನುಡಿದನು. ಮತ್ತೂ ಮುಂದುವರಿಸಿ "ನೀನು ಇದುವರೆಗೂ ಹೊರರಾಜ್ಯಗಳಲ್ಲಿ ಸಾಧಿಸಬೇಕಾದ್ದನ್ನೆಲ್ಲ ಸಾಧಿಸಿದ್ದಾಯಿತು. ಒಳದೇಶದಲ್ಲಿ ಸಾಧಿಸುವುದು ಸ್ವಲ್ಪ ಉಳಿದಿದೆ. ನಿನ್ನ ತಮ್ಮಂದಿರು ಇನ್ನೂ ನಿನಗೆ ಎರಗಿಲ್ಲ. 'ಭರತನೂ ಪುರುಸುತ, ನಾವೂ ಪುರುಸುತರು. ನಮಗೆ ತಂದೆ ರಾಜ್ಯ ಕೊಟ್ಟಿದ್ದಾನೆ. ನಮ್ಮ ಭಾಗ್ಯವನ್ನು ನಾವು ಅನುಭವಿಸುತ್ತೇವೆ' ಎಂದು ಅವರು ಮದಿಸಿದ್ದಾರೆ. ಅವರಲ್ಲೆಲ್ಲ ಅತಿ ಪರಾಕ್ರಮಿಯಾದ ಬಾಹುಬಲಿಯಂತೂ ತನ್ನ ತೋಳ್ಬಲವನ್ನೇ ಮೆರೆಯುತ್ತಿದ್ದಾನೆ. 'ಆದಿ ಬ್ರಹ್ಮನು ಕೊಟ್ಟ ಈ ರಾಜ್ಯಕ್ಕೆ ನಾನು ಒಡೆಯ. ಭರತನು ಅರಸಾದರೆ ನನಗೇನು?' ಎಂದು ಮದಿಸಿದ್ದಾನೆ. ಬಲಗರ್ವಿತರಾದ ಸುಭಟರ ತೋಳ್ಬಲವನ್ನು ಧ್ವಂಸ ಮಾಡುವುದು ಅವನಿಗೆ ಆಟವಾಗಿ ಹೋಗಿದೆ. 'ಶತ್ರುಗಳನ್ನು ಮುರಿದೇನೇ!' ಎಂದು ಅವನು ಸದಾ ಕಾತರಿಸುತ್ತಿದ್ದಾನೆ.

ರಾಜನೆಂಬ ಹೆಸರು ನಿನಗೊಬ್ಬನಿಗೆ ಸಲ್ಲತಕ್ಕದ್ದಾಗಿರಬೇಕು. ಭರತೇಶ್ವರಾ, ಅವರೆಲ್ಲರೂ ನಿನ್ನ ಕಾಲ್ಗೆರಗಿ ರಾಜಸುಖವನ್ನನುಭವಿಸಲಿ. ಒಲ್ಲದಿದ್ದರೆ ಪುರು ಪರಮೇಶ್ವರನ ಪಾದಪದ್ಮಕ್ಕೆರಗಿ ತಪಸ್ಸು ಮಾಡಲಿ. ಬೇರೆ ದಾರಿಯಿಲ್ಲ" ಎಂದನು.

## ಭರತಾನುಜರ ವೈರಾಗ್ಯ

ಕೇಳಿ ಭರತನಿಗೆ ಕೋಪ ಕೆರಳಿತು; ಕಣ್ಣು ಕೆಂಡವಾಯಿತು. "ಆಹಾ! ನನ್ನ ತಮ್ಮಂದಿರು ಹೀಗೆ ಮದಿಸಿರುವರೆ? ಇನ್ನಿವರನ್ನು ಯುದ್ಧಮಾಡಿ ಸೋಲಿಸಬೇಕು. 'ನಮಗೇನು ಮಾಡಿಯಾನು?' ಎಂದು ಅವರು ಭಾವಿಸಿಕೊಂಡು ತಾವೇ ಶೂರರೆಂದು ಸೊಕ್ಕಿದ್ದಾರೆ. ಹೀಗಿರುವಾಗ ಲೋಕವನ್ನೆಲ್ಲ ಗೆದ್ದು ತಾನೆ ಫಲವೇನು? ಬಾಹುಬಲಿಯೊಬ್ಬ ಸಿಡಿದು ನಿಂತಿರುವಾಗ ಲೋಕದರಸುಗಳೆಲ್ಲ ನನ್ನ ಕಾಲಿಗೆ ಬಿದ್ದರೂ ಬಂದ ಭಾಗ್ಯವೇನು?" ಎಂದು ಗರ್ಜಿಸಿದನು.

ತಮ್ಮಂದಿರ ಮೇಲೆ ದಂಡೆತ್ತಿ ನಡೆಯಲಿಚ್ಛಿಸಿದ ಚಕ್ರವರ್ತಿಯನ್ನು ಕುರಿತು, 'ದೇವಾ, ನಿನ್ನ ಒಂದು ಓಲೆಯಲ್ಲಿ ಮುಗಿಯುವಂಥದು ಈ ಮನೆ

ವಾರ್ತೆ. ಇದಕ್ಕೇಕಿಷ್ಟು ಮಾತು? ಅವರ ಬಳಿಗೆ ನಿನ್ನ ಶಾಸನವನ್ನು ಹೊತ್ತ ಹರಿಕಾರರನ್ನು ಕಳಿಸು' ಎಂದು ಪುರೋಹಿತನು ಸಲಹೆಕೊಟ್ಟನು.

ಭರತೇಶ್ವರ ಚಕ್ರವರ್ತಿಯ ಹರಿಕಾರರು ಆತನ ತಮ್ಮಂದಿರ ಬಳಿ ಹೋಗಿ, "'ಈ ಭೂಮಂಡಲ ಸಾಮ್ರಾಜ್ಯವು ನನ್ನೊಬ್ಬನ ಭೋಗಕ್ಕಾಗಿ ಮಾತ್ರವೇ ಅಲ್ಲ. ನಿಮ್ಮೆಲ್ಲರಿಗೂ ಹಿರಿಯಣ್ಣನಾದ ನಾನು ತಂದೆಯ ಸಮಾನ ವೆಂದು ತಿಳಿದು ವಿನಯವನ್ನು ತೋರಿಸಿ. ನಾವೆಲ್ಲಾ ಒಟ್ಟಿಗೆ ಇರೋಣ, ಬನ್ನಿ' ಎಂಬ ಒಡೆಯನ ಅಪ್ಪಣೆಯನ್ನು ನೆತ್ತಿಯಲ್ಲಿ ಹೊತ್ತುಬಂದು ಚಕ್ರ ವರ್ತಿಯ ಪಾದಕ್ಕೆರಗಿರಿ" ಎಂದು ತಿಳಿಸಿದರು.

ಅವರೆಲ್ಲರೂ ರಾಜಶಾಸನವನ್ನು ಕೇಳಿ ದೂತರಿಗೆ ಮರ್ಯಾದೆಮಾಡಿ ಕಳಿಸಿಕೊಟ್ಟರು. ಬಳಿಕ, "ಇದುವರೆಗೂ ಹಿರಿಯಣ್ಣ, ಗುರು, ತಂದೆ–ಎಂದು ಭರತನಿಗೆ ನಮಸ್ಕಾರ ಮಾಡುತ್ತಿದ್ದೆವು. ಈಗ 'ಆಳು, ಅರಸ' ಎಂಬ ಭೇದವುಂಟಾಯಿತೆ! ಛೆ! ಇದೆಂಥ ಪ್ರೀತಿ! ತಂದೆ ಕೊಟ್ಟ ರಾಜ್ಯಕ್ಕೆ ಇವ ನಿಗೆ ನಾವು ಕಿಂಕರರಾಗಬೇಕೇ? ಇದು ಅಕ್ಕಿ ಕೊಟ್ಟು ಎಂಜಲನ್ನ ತಿಂದ ಹಾಗಲ್ಲವೆ? ಇಂದ್ರವಂದಿತನಾದ ಪುರುದೇವನಿಗೆ ಮಕ್ಕಳಾಗಿ ಪರಮ ಪುರು ಷಾರ್ಥವನ್ನೇ ಪಡೆಯುತ್ತೇವೆ. ಈ ರಾಜ್ಯಭಾರ ವ್ಯರ್ಥವಾದ ಭಾರ" ಎಂದು ನಿಶ್ಚಯಿಸಿ ರಾಜ್ಯವನ್ನು ತೊರೆದು ಆದಿದೇವನ ಆಸ್ಥಾನಕ್ಕೆ ಹೊರಟು ಹೋದರು.

ಹೋಗಿ, "ದೇವಾ, ನೀನು ನಮಗೆ ರಾಜ್ಯವನ್ನು ಕೊಟ್ಟೆ. ಒಡ ಹುಟ್ಟಿದ ಕಾರಣ ಭರತನು 'ನನಗೆರಗಿ' ಎಂದು ಪೀಡಿಸುತ್ತಿದ್ದಾನೆ. ನಿನ್ನಡಿ ಗೆರಗಿದ ನಾವು ಮತ್ತಾರಿಗೂ ಎರಗಲಾರೆವು. ಆ ಭರತನನ್ನೂ ಅಡಿಗೆರಗಿಸುವ ತಪಸ್ಸನ್ನು ನಮಗೆ ದಯಪಾಲಿಸು" ಎಂದು ಬೇಡಿ ದೀಕ್ಷೆ ಹೊಂದಿದರು.

## ಬಾಹುಬಲಿಗೆ ರಾಯಭಾರ

ಆ ಸುದ್ದಿಯನ್ನು ಕೇಳಿ ಭರತನಿಗೆ ಪರಮಾಶ್ಚರ್ಯವಾಯಿತು. ಅವರ ಆ ನಡವಳಿಕೆಯನ್ನು ಮನಸ್ಸಿನಲ್ಲೇ ಶ್ಲಾಘಿಸಿದನು. "ಒಬ್ಬ ತಾಯ ಹೊಟ್ಟೆ ಯಲ್ಲಿ ಹುಟ್ಟಿದವರಾದರೂ ಇವರು ನನಗೆ ಎರಗಲಿಲ್ಲ. ಇನ್ನು ಆ ಬಾಹುಬಲಿ ನನಗೆ ತಗ್ಗುವನೆ? ಸೂರ್ಯಕಾಂತಮಣಿ ಬಿಸಿಲಿಗೆ ಮಾರುರಿಯುವಂತೆ

ಪರಾಕ್ರಮ ಪ್ರದರ್ಶನದಿಂದ ಅವನಿನ್ನೂ ಕೆರಳುತ್ತಾನೆ. ಆದ್ದರಿಂದ ಸಾಮದಿಂದಲೆ ವಶಪಡಿಸಿಕೊಳ್ಳಬೇಕು. ಅದು ಸಾಗದಿದ್ದರೆ ನನ್ನ ಮೆಚ್ಚಿನ ದಂಡ ಇದ್ದೇ ಇದೆ" ಎಂದು ಭಾವಿಸಿ ಮಂತ್ರಿಗಳೊಡನೆ ಆಪ್ತಾಲೋಚನೆ ನಡಸಿದನು. ಅವರೂ ಒಪ್ಪಿದರು.

ಆಗ ಚಕ್ರವರ್ತಿಯ ಅಪ್ಪಣೆಯ ಪ್ರಕಾರ ಸಂಧಿವಿಗ್ರಹಿಯು ಸಂಧಾನ ಕುಶಲನೂ ಯೋಗ್ಯನೂ ಆದ ಒಬ್ಬ ಮಹತ್ತರನನ್ನು ಬಾಹುಬಲಿಯ ಬಳಿಗೆ ಕಳಿಸಿದನು. ಆ ರಾಯಭಾರಿಯು ಕೆಲವು ದಿನಗಳಲ್ಲಿ ಪೌದನಪುರವನ್ನು ಸೇರಿ ತನ್ನ ಬರವನ್ನು ಹೇಳಿ ಕಳಿಸಿದನು. ಅಪ್ಪಣೆ ಪಡೆದು ಆಸ್ಥಾನವನ್ನು ಹೊಕ್ಕು ನೆಲಕ್ಕೆ ಬಗ್ಗಿ ನಮಸ್ಕಾರ ಮಾಡಿದನು.

ಪಚ್ಚೆಯ ಬೆಟ್ಟದಿಂದ ಉತ್ತಮ ಮನುಷ್ಯಾಕೃತಿಯನ್ನು ಆದಿಬ್ರಹ್ಮನು ನಿರ್ಮಿಸಿದನೋ ಎಂಬಂತೆಯೂ ಕ್ಷಾತ್ರ ತೇಜಸ್ಸೇ ದೊರೆಯ ರೂಪದಿಂದ ಅವತಾರ ಮಾಡಿದೆಯೋ ಎಂಬಂತೆಯೂ ಸುಂದರ ರೂಪಿನಿಂದ ಪ್ರಕಾಶಿಸುತ್ತಿದ್ದ ಬಾಹುಬಲಿಯನ್ನು ಕಣ್ಣಿಟ್ಟು ನೋಡಿದನು. ನೋಡಿ, 'ಈ ಕುಮಾರನ ತೇಜಸ್ಸು ಚಕ್ರವರ್ತಿಗೂ ಇಲ್ಲ' ಎಂದುಕೊಂಡನು.

ಬಳಿಕ, 'ದೇವಾ, ಇದು ನಿಮ್ಮ ಅಣ್ಣನಾದ ರಾಜಾಧಿರಾಜನು ನಿಮಗೆ ಕಳಿಸಿರುವ ಮಹಾಪ್ರಸಾದ. ಒಪ್ಪಿಸಿಕೊಳ್ಳಬೇಕು.' ಎಂದು ಉಪಾಯನ ರತ್ನ ಕರಂಡಕವನ್ನರ್ಪಿಸಿದನು. ಮಹಾಸಂಧಿ ವಿಗ್ರಹಿಯು ಅದನ್ನು ಕೈಗೆ ತೆಗೆದುಕೊಂಡು ಮುದ್ರೆಯೊಡೆದನು. ರತ್ನಾಭರಣಗಳನ್ನು ಕೋಶಾಧ್ಯಕ್ಷನ ವಶಕ್ಕೆ ಕೊಟ್ಟು ಲೇಖನವನ್ನು ಓದತೊಡಗಿದನು.

"ಸ್ವಸ್ತಿ. ಸಮಸ್ತಲೋಕಾಧೀಶ್ವರನಾದ ಪುರುಪರಮೇಶ್ವರನ ಪಾದಪದ್ಮಗಳಿಗೆರಗಿ, ಚಕ್ರರತ್ನದ ಕಾಂತಿಯಿಂದ ನಿಖಿಲ ದಿಗ್ದೇಶಗಳನ್ನೂ ಜಯಿಸಿರುವ ಭರತೇಶ್ವರ ಚಕ್ರವರ್ತಿಯು ತನ್ನ ಪ್ರಿಯಾನುಜನಾದ ಬಾಹುಬಲಿ ಕುಮಾರನನ್ನು ಪರಮಾಶೀರ್ವಾದಗಳಿಂದ ಹರಸಿ, ಬಿಲ್ಲುಗಳೆಂಬ ಲತೆಗಳಿಗೆ ಊರೆಗಂಬಗಳೂ ತನ್ನ ವಿಜಯೋತ್ಸವ ತೋರಣಸ್ತಂಭಗಳೂ ವೀರಶ್ರೀಯೆಂಬ ಹೆಣ್ಣು ಸರ್ಪಕ್ಕೆ ಆಶ್ರಯವಾದ ಚಂದನಕಾಂಡಗಳೂ ಆದ ಬಾಹುದಂಡಗಳಿಂದ ಅತಿಗಾಢವಾಗಿ ಆಲಿಂಗಿಸಿ, ಕಾರ್ಯವನ್ನು ಬೆಸಸಿದ್ದಾನೆ. ಮತ್ತೇನೆಂದರೆ ...."

ಎಂದು ಓದಿದನೊ ಇಲ್ಲವೊ, ಬಾಹುಬಲಿ, "ಸಾಕು, ನಿಲ್ಲಿಸು. ಕಾರ್ಯ ವೇನೆಂಬುದು ಆಮೇಲೆ ತಿಳಿಯಲಾಗುವುದು. ಮಹಾರಾಜನು ಅಯೋಧ್ಯಾ ಪಟ್ಟಣದಲ್ಲಿ ಸುಖವಾಗಿದ್ದಾನೆಯೇ, ಹೇಳು. ಚಕ್ರೇಶ್ವರನಿಗೆ ನಾನಾ ಚಿಂತೆ. ಹೇಗಾದರೂ ನಮ್ಮನ್ನು ನೆನೆದನಲ್ಲಾ! ದಿಗ್ವಿಜಯ ತಡೆಯಿಲ್ಲದೆ ನಡೆಯಿತಷ್ಟೆ? ಭೂವಲ್ಲಭನ ಭುಜಬಲಕ್ಕೆ ಚ್ಯುತಿಯಿಲ್ಲ ತಾನೆ? ಅರಸುಗಳೆಲ್ಲ ತಗ್ಗಿ ಬಂದರೆಂದೂ ದಿಕ್ಕುಗಳೆಲ್ಲ ಅಳುಕಿದವೆಂದೂ ಲೋಕವೇ ಹೊಗಳುತ್ತಿರಲು ಕೇಳಿ ಆನಂದಿಸುತ್ತಿದ್ದೇವೆ. ಅಲ್ಲವೆ, ಹೇಳು." ಎಂದು ಭರತನ ದೂತನನ್ನು ಕುರಿತು ನುಡಿದನು.

ಆ ದೂತನು, "ದೇವಾ, ನಿಮ್ಮಣ್ಣನ ದಿಗ್ವಿಜಯ ವೃತ್ತಾಂತವನ್ನು ಕೇಳಲು ನಿಮಗೆ ತುಂಬ ಆನಂದವಲ್ಲವೆ. ಅದನ್ನು ಪೂರ್ಣವಾಗಿ ವಿವರಿಸಲು ನನಗೆ ಸಾಧ್ಯವಿಲ್ಲ. ಸಂಕ್ಷೇಪವಾಗಿ ಹೇಳುತ್ತೇನೆ" ಎಂದು ಚಕ್ರವರ್ತಿಯ ವಿಜಯಯಾತ್ರೆಯನ್ನು ಬಣ್ಣಿಸತೊಡಗಿದನು: "ನಿಮ್ಮಣ್ಣನು ಪುರು ಪರಮೇಶ್ವರನ ಕೇವಲ ಜ್ಞಾನಪೂಜೆಯನ್ನೂ ಚಕ್ರಪೂಜೆಯನ್ನೂ ನೆರವೇರಿಸಿ, ಸಾಹಸ ಮುಗಿಲು ಮುಟ್ಟುವಂತೆ ತನ್ನ ಪ್ರತಾಪವನ್ನು ತೋರಿಸಲೆಳಸಿ ದಿಗ್ವಿಜಯಕ್ಕೆ ಹೊರಟನು. ಎದುರಿಸುವ ಜಟ್ಟಿಗರು ಯಾರೂ ಇಲ್ಲದಂತೆ ಸಕಲ ದಿಕ್ಚಕ್ರವನ್ನೂ ಗೆಲ್ಲಲು ಸಮರ್ಥವಾದ ಚಕ್ರವನ್ನೊಡಗೊಂಡು ನಡೆದನು. ಆ ವೈಭವವೇನು ಸಾಮಾನ್ಯವೇ?

ಗಿರಿದುರ್ಗ ಜಲದುರ್ಗ ವನದುರ್ಗಗಳಾವುವೂ ಆತನಿಗೆ ಅಡ್ಡಿಯಾಗಲಿಲ್ಲ. ಪೂರ್ವ ದಕ್ಷಿಣ ಪಶ್ಚಿಮ ಸಮುದ್ರ ತೀರಗಳ ದೇಶಾಧಿಪತಿಗಳನ್ನೆಲ್ಲ ಅಡಿಗೆರಗಿಸಿದನು. ರಥವೇರಿ ಸಮುದ್ರದಲ್ಲಿ ನುಗ್ಗಿ ಅಲ್ಲಿನ ವ್ಯಂತರಾಮರರನ್ನು ಬಾಣವೊಂದರಿಂದಲೆ ಗೆದ್ದುಬಂದನು. ವಿಜಯಾರ್ಧಕುಮಾರನನ್ನೂ ಕೃತಮಾಲಾಮರನನ್ನೂ ಅಧೀನಮಾಡಿಕೊಂಡನು. ತಮಿಸ್ರಗುಹೆಯ ವಜ್ರಕವಾಟವನ್ನು ಭೇದಿಸಿದನು. ಉತ್ತರಭರತದಲ್ಲಿ ಮಾರಾಂತ ಬಲಾಕಾವರ್ತರನ್ನೂ ಅವರ ನೆರವಿಗೆ ಬಂದ ಮೇಘಮುಖರನ್ನೂ ಅಡಗಿಸಿದನು. ಸಿಂಧೂದೇವಿಯಿಂದ ಅಭಿಷೇಕಗೊಂಡು ಹಿಮವತ್ಕುಮಾರನ ಕಾಣಿಕೆಯನ್ನು ಸ್ವೀಕರಿಸಿ ವೃಷಭಾದ್ರಿಯಲ್ಲಿ ಅಪ್ರತಿಹತವಾದ ತನ್ನ ವಿಜಯದ ಪ್ರಶಸ್ತಿಯನ್ನು ಕೆತ್ತಿಸಿದನು. ಬಳಿಕ ಗಂಗಾದೇವಿಯೊಪ್ಪಿಸಿದ ಅನರ್ಘರತ್ನಗಳನ್ನು ಸ್ವೀಕರಿಸಿ

ನಮಿ ವಿನಮಿ ಮೊದಲಾದ ವಿದ್ಯಾಧರರನ್ನೆಲ್ಲ ಆಜ್ಞಾವಿಧೇಯರನ್ನಾಗಿ ಮಾಡಿದನು. ಕಡೆಗೆ ಕಾಂಡಕ ಪ್ರಪಾತ ಗುಹೆಯ ವಜ್ರದ ಬಾಗಿಲನ್ನು ಭೇದಿಸಿಕೊಂಡು ವಿಜಯಾರ್ಧ ಪರ್ವತವನ್ನು ದಾಟಿ ಬಂದನು. ಹೀಗೆ ದೇವಾಸುರ ಖೇಚರಾದಿಗಳನ್ನೆಲ್ಲ ಆಜ್ಞಾವರ್ತಿಗಳಾಗಿ ಮಾಡಿಕೊಂಡು ದಿಗ್ವಿಜಯವನ್ನು ಪೂರ್ಣಮಾಡಿದನು.

ರಾಜಧಾನಿಗೆ ಹಿಂದಿರುಗಿ ಆ ಭರತ ಚಕ್ರವರ್ತಿ, ' ನನ್ನ ಪ್ರಿಯ ತಮ್ಮ ನಿಲ್ಲದೆ ಈ ಸಾಮ್ರಾಜ್ಯವೆಲ್ಲ ಬಿಮ್ಮೆನಿಸುತ್ತಿದೆ. ಅವನೊಬ್ಬ ನನಗೆರಗದಿದ್ದರೆ ಈ ಚಕ್ರವರ್ತಿ ಪದವಿಯೂ ಜೊಡ್ಡದಲ್ಲ' ಎಂದು ಬೆಸಸಿ ನನ್ನನ್ನು ತಮ್ಮಲ್ಲಿಗೆ ಅಟ್ಟಿದನು. ಸಹಜ, ಕೃತ್ರಿಮ—ಎಂದು ವಿನಯ ಎರಡು ವಿಧ. ಅವೆರಡೂ ತಿಳಿದವರನ್ನು ಬೇರೆ ಬೇರೆ ರೀತಿಯಿಂದ ಮೆಚ್ಚಿಸುವುವು. ದೇವಾ, ನಿನ್ನಲ್ಲಿ ಅವೆರಡೂ ಉಂಟು" ಎಂದು ನುಡಿದು ಸುಮ್ಮನಾದನು.

## ಬಾಹುಬಲಿಯ ದರ್ಪೋಕ್ತಿ

ದೂತನ ಆ ಮಾತುಗಳನ್ನು ಕೇಳಿ ಬಾಹುಬಲಿಯ ಕ್ರೋಧ ಉಕ್ಕೇರಿತು. ಕೋಪವನ್ನೊಳಗೊಂಡ ಮುಗುಳುನಗೆ ನಕ್ಕು ಹೇಳತೊಡಗಿದನು :

" ನಮ್ಮ ಮನಸ್ಸನ್ನರಿಯಲು ಮೊದಲು ಸಾಮವನ್ನು ನುಡಿದೆ. ಆಮೇಲೆ ಭೇದ ದಂಡಗಳನ್ನೂ ಸೂಚಿಸಿದೆ. ತಿದ್ದಿ ಅಚ್ಚುಕಟ್ಟಾಗಿ ಆಡುವ ಮಾತಿನ ಬಲ್ಮೆ ನಿನಗೆ ಚೆನ್ನಾಗಿದೆ.

ನಿನ್ನ ದೊರೆಯ ದಿಗ್ವಿಜಯದ ಉನ್ನತಿಯನ್ನು ಹೊಗಳಿ ಹೊಗಳಿ ನೀ ಮರೆತುಹೋದೆಯಲ್ಲವೆ ! ಅದು ಅವನ ಭಂಗವನ್ನೆ ಎತ್ತಿ ತೋರಿಸುವಂತಾಯಿತು. ಚಕ್ರವನ್ನು ಮುಂದಿಟ್ಟುಕೊಂಡು ಲೋಕವನ್ನೆಲ್ಲ ಸುತ್ತಿ ತೊಳಲಿದ್ದನ್ನೂ, ತಾನು ಹೂಳದ ನಿಧಿಯನ್ನು ಕಿತ್ತು ತಂದಂತೆ ವಸ್ತುಗಳನ್ನು ಹೊತ್ತು ತಂದದ್ದನ್ನೂ ಏನೆಂದು ಹೊಗಳುವೆಯೋ ಕಾಣೆ. ಸಮುದ್ರದ ದಡದಲ್ಲಿ ಹಸಿದು ಬಿದ್ದಿದ್ದು ಉದಕಮಂತ್ರದ ಬಲದಿಂದ ಕಡಲಿನಲ್ಲಿ ನುಸುಳಿದಾಗ ಅಮರರು ಕರುಣೆಯಿಂದ ಅವನಿಗೆ ಧನವನ್ನು ಕೊಟ್ಟರು ; ಅಂಜಿ ಕೊಟ್ಟರೆ ? ಉತ್ತರ ಭರತದಲ್ಲಿ ಅವನಿಗೆ ಆದ ಆಪತ್ತು ನಿನಗೆ ತಿಳಿಯದೆಂದು ತೋರುತ್ತದೆ. ಬಳಕಾವರ್ತರು ಮುತ್ತಿ ಇವನ ಪಡೆ ಗೋಳು ಕರೆಯುವಂತೆ ಮಾಡ

ಲಿಲ್ಲವೇ ? ಮೇಘಮುಖರ ಜಲವರ್ಷದಲ್ಲಿ ಕೋಡಿಚರ್ಮಗಳ ಮರಿಹೊಕ್ಕು ಗೂಡು ಹೊಕ್ಕಂತೆ ಅಡಗಿದ್ದ ನಮ್ಮಗ್ರಜನ ದಿಗ್ವಿಜಯ ಪರಾಕ್ರಮ ಬಹು ಮಹತ್ವದ್ದೇ ಸರಿ! ತನ್ನ ಪ್ರಶಸ್ತಿಯನ್ನು ಕೆತ್ತಿಸಿದನೆಂದೆ. ಪೂರ್ವ ಚಕ್ರ ವರ್ತಿಗಳ ಪ್ರಶಸ್ತಿಯನ್ನಳಿಸಿಯಲ್ಲವೇ, ತನ್ನದನ್ನು ಕೆತ್ತಿಸಿದ್ದು ? ಯಶಸ್ಸೇ ನಿಜವಾದ ಧನ. ಅದನ್ನು ಈ ರೀತಿ ಅಳಿಸಿ ಕೆಡಿಸಿದವನು ಪಡೆದ ಧನ ಅದೆಂಥ ಧನ ?

ಹಿರಿಯಣ್ಣನಿಗೆ ಪ್ರೀತಿಯಿಂದ ಎರಗುವುದೇನವಮಾನವಲ್ಲ. ಆದರೆ ಅವನು ನೆತ್ತಿಯ ಮೇಲೆ ಕತ್ತಿಯೂರಿ ಬಲದಿಂದ ಎರಗಿಸಹೊರಟಿದ್ದಾನೆ. ಹೀಗಿರುವಾಗ ನಾವು ಭರತನಿಗೆರಗುವುದು ಹೇಡಿತನವಾದೀತು. ಅಣ್ಣತಮ್ಮಂ ದಿರು ಹೊಂದಿಕೊಂಡಿದ್ದರೆ ವಿನಯ, ಪ್ರೀತಿ—ಎಲ್ಲ ಒಪ್ಪುತ್ತದೆ. ಈಗ ಭರ ತನು ನನ್ನ ಹೆಸರು ಕೇಳಿದರೂ ಸೈರಿಸಲಾರ. ಅಂಥವನಿಗೆ ತಲೆಬಾಗಿ ಲೋಕ ದಿಂದ ನಗಿಸಿಕೊಳ್ಳುವವನಲ್ಲ, ನಾನು.

ಭರತನು ಷಟ್ಖಂಡ ಚಕ್ರವರ್ತಿಯೆಂಬ ವೈಭವವನ್ನು ದೂರದಲ್ಲೆ ಕೇಳಿ ವಿಶ್ವಾಸದಿಂದಿರುವ ಈ ಬಂಧುತ್ವವೇ ಸಾಕು. ಕರೆದರೆ 'ಏನಪ್ಪಣೆ' ಎನ್ನುವ, 'ಜೀಯ, ದೇವಾ, ಮಹಾಪ್ರಸಾದ' ಎನ್ನುವ ದೈನ್ಯಕ್ಕೆ ನಾನು ಮೈಯೊಡ್ಡುವವನಲ್ಲ. 'ಆಳು, ಅರಸ' ಎಂಬ ಭೇದ ನಮಗೇಕೆ ? ಆದಿದೇವನಾದ ಪುರುದೇವನು ಕೊಟ್ಟಿರುವ ರಾಜ್ಯಕ್ಕೆ ಯಾರ ಹಂಗೇನು ? ತಂದೆ ರಾಜ್ಯವನ್ನು ಕೊಟ್ಟಾಗ ನನಗೂ ಅವನಿಗೂ ಇಬ್ಬರಿಗೂ 'ರಾಜ' ಎಂಬ ಹೆಸರನ್ನು ಕೊಟ್ಟನು. ಈಗ ತಾನು 'ರಾಜಾಧಿರಾಜ'ನೆಂಬ ಹೆಮ್ಮೆಯ ಹೆಸರನ್ನಿಟ್ಟುಕೊಂಡಿದ್ದಾನೆ! ಚಕ್ರ ಹುಟ್ಟಿ ಚಕ್ರವರ್ತಿಯಾದ ಮಾತ್ರಕ್ಕೇ ನನ್ನ ಮೇಲೇಕೆ ಈ ಆಕ್ರಮಣವನ್ನು ತೋರಬೇಕು ? ಹುರು ಳಿಲ್ಲದ ಈ ಮಾತನ್ನು ಸರಿಸಮನಾದ ನನಗೆ ಹೇಳುವುದೆ ? ಭರತ ಬಾಹುಬಲಿ ಗಳಿಬ್ಬರೂ ಪುರುತನಯರು. ಅವರಲ್ಲಿ ಯಾರಳವು ಎಷ್ಟೆಂಬುದನ್ನು ಲೋಕ ವರಿಯುವಂತೆ ತೂಗಿ ತೋರಿಸುವ ತಕ್ಕಡಿ ಈ ನನ್ನ ತೋಳು.

ಷಟ್ಖಂಡ ಭೂಮಂಡಲವನ್ನೂ ಗೆದ್ದ ಅಖಂಡಪ್ರತಾಪನಾದ ಚಕ್ರ ವರ್ತಿಯು, ತನ್ನ ಆರು ಬಲಗಳನ್ನೂ ಕೂಡಿಕೊಂಡು ಬರಲಿ. ಪ್ರಾಣಪ್ರಿಯ

ರಾದ ಹೆಂಡಿರುಮಕ್ಕಳಲ್ಲೂ ಧನಸಮೂಹದಲ್ಲೂ ಆಸೆ ತೊರೆದು ಕಾಳಗಕ್ಕೆ ಬರಲಿ. ಯಾರು ಹೆಚ್ಚು ಎನ್ನುವುದನ್ನು ನೀನು ಕಾಣುತ್ತೀಯೆ."

ಹೀಗೆ ದರ್ಪೋಕ್ತಿಗಳನ್ನಾಡಿ ಚಕ್ರವರ್ತಿಯ ದೂತನನ್ನು ಉಚಿತ ರೀತಿಯಲ್ಲಿ ಸತ್ಕರಿಸಿ ಹಿಂದಕ್ಕೆ ಕಳಿಸಿದನು.

## ಯುದ್ಧ ಸನ್ನಾಹ

ಆ ದೂತನು ಸಾಕೇತಪುರವನ್ನು ಸೇರಿ ಆಸ್ಥಾನದಲ್ಲಿದ್ದ ಚಕ್ರವರ್ತಿಯನ್ನು ಕಂಡು ನಮಸ್ಕರಿಸಿ ನಡೆದದ್ದನ್ನೆಲ್ಲ ವಿವರಿಸಿದನು. " ರಾಜಾಧಿರಾಜಾ, ಷಟ್ಖಂಡ ಭೂಮಂಡಲವೂ ನಿನ್ನಡಿಗೆರಗಿದ್ದು ಸಾಲದೆ ? ಮಿತಿಮೀರಿದ ಈ ಹೆಮ್ಮೆಗಾರನಿಂದೇನೆಂದು ಕಡೆಗಣಿಸಿ ಸುಮ್ಮನಿದ್ದುಬಿಡುವುದು ಉಚಿತ. ಹಾಗೆ ಮಾಡಿದರೆ ಮರ್ಯಾದೆಯನ್ನು ಕಾದ ನಿಮ್ಮ ದೊಡ್ಡತನ ಲೋಕದಲ್ಲೆಲ್ಲ ಹರಡುವುದು. ನೀವು ಕೋಪಗೊಂಡರೆ ನಿಮ್ಮ ತಮ್ಮ ನಿಮಗೆರಗುವುದಿಲ್ಲ. ಇದು ನಿಜ. ಎಂದು ನುಡಿದನು.

ಕೇಳಿ ಚಕ್ರವರ್ತಿ, " ನಮ್ಮ ದಿಗ್ವಿಜಯ ತುದಿಮುಟ್ಟಿತು. ಈಗ ನಮ್ಮ ದಾಯಾದನು ನನ್ನೊಡನೆ ಕಾದಬೇಕೆಂದು ಉಬ್ಬಿ ನಿಂತಿದ್ದಾನೆ. ಕದನ ಬೇಡವೆಂದು ಬಿಡುವುದು ಕ್ರಮವಲ್ಲ. ಅವನ ಭುಜಬಲವನ್ನೂ ನೋಡೋಣ" ಎಂದು ಆಸ್ಥಾನದಿಂದ ಎದ್ದನು.

ಭರತ ಬಾಹುಬಲಿಗಳಿಬ್ಬರೂ ಸೇನೆಗಳನ್ನು ಸಿದ್ಧಮಾಡಿಕೊಂಡರು. ಚಕ್ರವರ್ತಿಯ ವಿಜಯ ಸೈನ್ಯ ರಾಜಧಾನಿಯಿಂದ ಪೌದನಪುರಕ್ಕೆ ಪ್ರಯಾಣ ಮಾಡಿತು. ಬಾಹುಬಲಿಯ ಪಡೆ ಅದನ್ನಡ್ಡಗಟ್ಟಿತು. ಅಣ್ಣತಮ್ಮಂದಿರಿಬ್ಬರೂ ಧನುರ್ಧಾರಿಗಳಾಗಿ ಎದುರು ಬದುರು ನಿಂತರು.

## ಮಂತ್ರಿಗಳ ಸಂಧಾನ

ಇನ್ನೇನು ಕದನ ಮೊದಲಾಗಬೇಕು ಎನ್ನುವಷ್ಟರಲ್ಲಿ ಎರಡು ಕಡೆಯ ಮುಖ್ಯ ಮಂತ್ರಿಗಳೂ, "ಈ ಇಬ್ಬರರಸುಗಳೂ ಚರಮ ದೇಹಧಾರಿಗಳು. ಇವರು ಯುದ್ಧಕ್ಕೆ ತೊಡಗಿದರೆ ಸಕಲ ಸೈನ್ಯವೂ ನಾಶವಾಗುವುದು. ಜನ ಸಂಹಾರಕ್ಕೆ ಕಾರಣವಾಗುವ ಯುದ್ಧ ಬೇಡ. ಧರ್ಮ ಯುದ್ಧವೇ ನಡೆಯಲಿ"

ಎಂದುಕೊಂಡರು. ಹೀಗೆ ಆಲೋಚಿಸಿ ಇಬ್ಬರೂ ಮೊದಲು ಭರತ ಚಕ್ರವರ್ತಿಯ ಬಳಿ ಬಂದರು.

"ದೇವಾ, ದೃಷ್ಟಿಯುದ್ಧ, ಜಲಯುದ್ಧ, ಮಲ್ಲಯುದ್ಧಗಳಲ್ಲಿ ನೀವು ಜಯವನ್ನು ನಿರ್ಧರಿಸಿರಿ. ಜನ ವಿನಾಶಕ್ಕೆ ಕಾರಣವಾದ ಯುದ್ಧದಿಂದ ಪ್ರಯೋಜನವೇನು? ಪಾಪ, ಅಪಯಶಸ್ಸು, ಅಷ್ಟೇ. ಅದನ್ನು ಬಿಡಿ. ಲೋಕದ ನಿಂದೆ ತಾಕದ ಹಾಗೆ ಧರ್ಮಯುದ್ಧ ಮಾಡಿ" ಎಂದು ಬೋಧಿಸಿದರು. ಚಕ್ರವರ್ತಿ ಅದಕ್ಕೆ ಒಪ್ಪಿಕೊಂಡನು.

ಮಂತ್ರಿಗಳಿಬ್ಬರೂ ಬಾಹುಬಲಿಯ ಸಮೀಪಕ್ಕೆ ಹೋಗಿ ಮೊದಲಿನಂತೆಯೆ ಧರ್ಮಯುದ್ಧದ ಏರ್ಪಾಟನ್ನು ಬಿನ್ನಯಿಸಿದರು. ಬಾಹುಬಲಿಗೆ ಅವರ ಮಾತು ರುಚಿಸಲಿಲ್ಲ. "ನನ್ನ ಚತುರಂಗಬಲವನ್ನು ಯಾವನೆದುರಿಸುತ್ತಾನೆ" ಎಂದು ನಿಮ್ಮರಸ ಗರ್ವಪಡುತ್ತಾನೆ. ಆ ಗರ್ವದ ಉನ್ನತಿಯನ್ನು ಮೊದಲು ಸ್ವಲ್ಪ ನೋಡುತ್ತೇನೆ. ಬಳಿಕ ಧರ್ಮಯುದ್ಧವಾಗಲಿ" ಎಂದು ಕೋಪದಿಂದಲೇ ನುಡಿದು ವಿಷಣ್ಣನಾಗಿ ನಿಂತನು.

ಮಂತ್ರಿಗಳು, "ಈ ಕೆಟ್ಟ ಆಗ್ರಹ ಬೇಡ. ಬಿಟ್ಟುಬಿಡು. ಯುವರಾಜಾ, ಪ್ರಸನ್ನಚಿತ್ತನಾಗಿ ಈ ಮಾತು ಕೇಳು. ಮನಸ್ಸುಮಾಡಿ ಒಮ್ಮೆ ಈ ಮುದುಕರ ಮಾತನ್ನು ನಡಸಿಕೊಡು" ಎಂದು ಹಿತನುಡಿದರು. ಕಡೆಗೂ ಬಾಹುಬಲಿಯನ್ನೊಡಂಬಡಿಸಿದರು.

## ಧರ್ಮ ಯುದ್ಧ

ಎರಡು ಕಡೆಗಳಲ್ಲೂ ಆನಂದ ಭೇರಿಗಳು ಮೊಳಗಿದವು. * ಐನೂರು ಬಿಲ್ಲೆತ್ತರದ ಭರತನೂ ಐನೂರಿಪ್ಪತ್ತೈದು ಬಿಲ್ಲೆತ್ತರದ ಬಾಹುಬಲಿಯೂ ಮುಂದೆ ಬಂದರು. ಒಬ್ಬರನ್ನೊಬ್ಬರು ಎದುರಿಸಿ ನಿಂತು ನೀಲ ನಿಷಧ ಪರ್ವತಗಳು ಹೋರಬಂದುವೋ ಎಂಬಂತೆ ಕಾಣುತ್ತಿದ್ದರು. ಎರಡು ಕಡೆಯವರೂ ಮಧ್ಯಸ್ಥರಾಗಿ ನೋಡುತ್ತ ನಿಂತರು.

---

* ಆ ಆದಿಕಾಲದಲ್ಲಿ ಜನರ ದೇಹಪ್ರಮಾಣ, ಆಯುಸ್ಸು ಎಲ್ಲವೂ ಬಹಳ ಹೆಚ್ಚಾಗಿತ್ತೆಂದೂ, ಕ್ರಮ ಕ್ರಮವಾಗಿ ಕಡಮೆಯಾಗುತ್ತ ಬಂತೆಂದೂ ಪುರಾಣಗಳ ಹೇಳಿಕೆ. ಭರತ ಚಕ್ರವರ್ತಿಯ ದಿಗ್ವಿಜಯಕ್ಕೆ ಅರುವತ್ತು ಸಾವಿರ ವರ್ಷ ಹಿಡಿಯಿತಂತೆ.

ಮೊದಲು ದೃಷ್ಟಿಯುದ್ಧ. ಒಬ್ಬರನ್ನೊಬ್ಬರು ಎವೆಯಿಕ್ಕದೆ ನೋಡುತ್ತ ನಿಂತರು. ಬಾಹುಬಲಿ ಕಣ್ಣಿನಲ್ಲೆ ಹೀರಿಬಿಡುವಂತೆ ಭರತನನ್ನು ಅಲುಗದೆ ನೋಡುತ್ತಿದ್ದನು. ಆ ತೇಜಸ್ಸನ್ನು ಸೈರಿಸಲಾರದೆ ಭರತರಾಜನು ಕಣ್ಣು ಮುಚ್ಚಿ ಸೋತುಹೋದನು.

ಆಮೇಲೆ ಜಲಯುದ್ಧ ಮೊದಲಾಯಿತು. ಮದಿಸಿದಾನೆಗಳಂತೆ ಕೊಳಕ್ಕೆ ನುಗ್ಗಿ ಒಬ್ಬರಮೇಲೊಬ್ಬರು ನೀರೆರಚತೊಡಗಿದರು. ಭರತನ ಮುಖದಲ್ಲಿ ಹಬ್ಬಿದ ಕೋಪದ ಬೆಂಕಿಯನ್ನು ಆರಿಸುವವನ ಹಾಗೆ ಬಾಹುಬಲಿ ಅವನ ಮುಖಕ್ಕೆ ತಿಳಿನೀರು ತುಳುಕಿದನು. ಭರತೇಶ್ವರನೆರಚಿದ ನೀರು ಬಾಹುಬಲಿಯ ಎದೆಗೆ ಮಾತ್ರ ತಾಕಿತು. ಆನೆಯ ಸೊಂಡಿಲಿನಂತಿರುವ ಬಾಹುಬಲಿಯ ಕೈ ಎರಚುವ ನೀರೇಟಿಗೆ ಮುಖಕೊಡಲಾರದೆ ಚಕ್ರವರ್ತಿ ಮುಖದಿರುಹಿದನು.

ಕಡೆಯದಾಗಿ ಬಾಹು ಯುದ್ಧ ಪ್ರಾರಂಭವಾಯಿತು. ಅವರಿಬ್ಬರ ಹೋರಾಟವನ್ನೂ ನೋಡಿ ಎರಡು ಕಡೆಯಲ್ಲೂ ನೆರೆದ ಸುರ ನರ ವಿದ್ಯಾಧರ ಬಲವೆಲ್ಲ ಬೆರಗಾಯಿತು. ಕಡೆಗೆ ಬಾಹುಬಲಿ ಭರತನನ್ನು ಹಿಡಿದೆತ್ತಿ ಬೀಸಿ ಸುತ್ತಿಸಿದನು. ಹೊಂಬೆಟ್ಟವನ್ನು ಹೊತ್ತ ಪಚ್ಚೆಯ ಬೆಟ್ಟವೋ ಎಂದು ತೋರುತ್ತಿದ್ದನು. ಹಾಗೆ ಎತ್ತಿ ಹಿಡಿದುಕೊಂಡು, "ಇವನು ಭರತ ಭೂಮಿಗೆಲ್ಲ ಒಡೆಯ. ಹಿರಿಯಣ್ಣ, ಆದ್ದರಿಂದ ಗುರು. ಮಹಾಮಹಿಮನಾದ ಇವನನ್ನು ನೆಲಕ್ಕೆ ಕೆಡವಿ ಭಂಗಪಡಿಸುವುದು ಸರಿಯಲ್ಲ" ಎಂದು ಭಾವಿಸಿ ಭರತನನ್ನು ಮೆಲ್ಲಗೆ ನೆಲಕ್ಕಿಳಿಸಿದನು.

ಬಾಹುಬಲಿಯ ಪಡೆ ಉಬ್ಬಿ ವಿಜಯಘೋಷಣೆ ಮಾಡಿತು. ಭರತನ ಬಲ ಕಳೆಗೆಟ್ಟು ತಲೆ ತಗ್ಗಿಸಿತು.

ನೆರೆದ ಎರಡು ಬಲಗಳೆದುರಿಗೆ, ಅಷ್ಟು ಮಂದಿ ಅರಸುಗಳ ಮುಂದೆ, ತನಗೆ ಹಾಗೆ ಸೋಲಾಗಲು ಭರತನು ಕೋಪದುರಿಗಳನ್ನುಗುಳತೊಡಗಿದನು. ಚಕ್ರರತ್ನವನ್ನು ನೆನೆದು ಬಾಹುಬಲಿಯನ್ನು ತಾಗುವಂತೆ ಅಪ್ಪಣೆಮಾಡಿದನು.

ಚಕ್ರವರ್ತಿ ನೆನೆದ ಕೂಡಲೆ ಚಕ್ರರತ್ನ ಮುಂದೆ ಬಂದಿತು. ಆದರೆ ಆ

ಅಪ್ಪಣೆಯನ್ನು ನಡಸಲಾರದಾಯಿತು. ಅದು ಬಾಹುಬಲಿಗೆ ಮೂರು ಸಾರಿ ಪ್ರದಕ್ಷಿಣೆ ಮಾಡಿ ಅವನ ಬಲಭುಜದ ಪಕ್ಕದಲ್ಲಿ ನಿಂತುಬಿಟ್ಟಿತು.

ಆಗ ಬಾಹುಬಲಿಯ ಕೀರ್ತಿ ಲೋಕವನ್ನೆಲ್ಲ ಹಬ್ಬಿತೆಂಬಂತೆ ದೇವ ದುಂದುಭಿಗಳು ಮೊಳಗಿದವು. ದೇವಸ್ತ್ರೀಯರು ಮಂಗಳ ಗೀತಗಳನ್ನು ಹಾಡಿದರು. ಸಂತುಷ್ಟರಾದ ದೇವತೆಗಳ ಆನಂದಬಾಷ್ಪದ ಸುರಿಮಳೆಯೋ ಎಂಬಂತೆ ಪುಷ್ಪವೃಷ್ಟಿ ಸುರಿಯಿತು.

## ಭರತನ ಲಜ್ಜೆ, ಬಾಹುಬಲಿಯ ತ್ಯಾಗ

'ಚಕ್ರವರ್ತಿ ತನಗಲ್ಲದ್ದನ್ನು ಮಾಡಿದನಲ್ಲಾ!' ಎಂದು ಕುಲವೃದ್ಧರೂ ಅಲ್ಲಿ ನೆರೆದ ಉಳಿದವರೆಲ್ಲರೂ ಆಡತೊಡಗಿದರು. ಕೇಳಿ ಭರತೇಶ್ವರನು ನಾಚಿ ತಲೆ ತಗ್ಗಿಸಿದನು.

ಬಾಹುಬಲಿಗೂ ಮನಸ್ಸು ನೊಂದಿತು. "ಭರತೇಶ್ವರನು ನನ್ನಲ್ಲೂ ಇಂಥ ಸಾಹಸ ಮಾಡಿದನೇ! ಆಹಾ, ರಾಜ್ಯಮೋಹವನ್ನು ತೊರೆಯುವುದು ಎಷ್ಟು ಕಷ್ಟ! ಇದು ಸೋದರರನ್ನು ಕಾದಿಸುತ್ತದೆ; ತಂದೆಮಕ್ಕಳಿಗೆ ಮುನಿಸುಂಟುಮಾಡುತ್ತದೆ. ಮನುಕುಲತಿಲಕನಾದ ಇಂಥವನನ್ನೂ ಹೀಗೆ ಮತಿಗೆಡಿಸಿಬಿಟ್ಟಿತು. ಇನ್ನು ದುಷ್ಟರ ವಿಚಾರವನ್ನು ಹೇಳುವುದೇನು? ಇಂಥ ರಾಜ್ಯೈಶ್ವರ್ಯವನ್ನು ತಾಳುವುದು ತಾನೆ ಹೇಗೆ?" ಎಂದು ಮುಂತಾಗಿ ಆಳವಾಗಿ ಆಲೋಚಿಸಲು ಮೊದಲುಮಾಡಿದನು. ಕಡೆಗೆ, "ಕೆಡುವ ಒಡಲು, ಕೆಡುವ ರಾಜ್ಯ—ಈ ಒಂದೂ ನನಗೆ ಬೇಡ" ಎಂದು ನಿಶ್ಚಯಿಸಿ ಜೈನ ದೀಕ್ಷೆಯನ್ನು ಧರಿಸಲು ಸಂಕಲ್ಪಿಸಿದನು.

ಬಳಿಕ ಭರತನನ್ನು ಕುರಿತು, "ಚಕ್ರೇಶ್ವರಾ, ನಾಚಿಕೆಯನ್ನು ಬಿಡು. ಕೋಪವನ್ನು ತೊರೆ. ಈ ತಮ್ಮಂದಿರ ಮೇಲೆ ಆಗ್ರಹಮಾಡುವುದು ದೊಡ್ಡತನವೆ? ರಾಜ್ಯಲಕ್ಷ್ಮಿ ನಿನ್ನ ವಕ್ಷಸ್ಥಳದಲ್ಲೇ ನೆಲಸಿರಲಿ. ತಂದೆ ಕೊಟ್ಟ ಭೂಮಿಯನ್ನು ನಾನು ನಿನಗೆ ಕೊಟ್ಟೆ. ನೀನು ಬಯಸಿದ ನೆಲಕ್ಕೆ ನಾನು ಆಸೆ ಮಾಡಿದರೆ, ನೀನು ಒಲಿದ ಹೆಣ್ಣಿಗೆ ಆಸೆ ಮಾಡಿದಂತೆ. ಅದು ಉಚಿತವಲ್ಲ. ಅಣ್ಣಾ, ಸರಿಯಾಗಿ ವಿಚಾರಮಾಡದೆ ನಿನ್ನ ವಿಷಯದಲ್ಲಿ ದೊಡ್ಡ ಅವಿನಯ

ವನ್ನಾಚರಿಸಿದ್ದೇನೆ. ಆ ದೋಷವನ್ನು ತಪಸ್ಸುಮಾಡಿ ಪರಿಹರಿಸಿಕೊಳ್ಳು ತ್ತೇನೆ. ನನ್ನ ಈ ಅಪರಾಧವನ್ನು ಮನ್ನಿಸು" ಎಂದು ನುಡಿದನು.

ಬಾಹುಬಲಿ ತಪಸ್ಸಿಗೆ ಹೊರಡಲಿರುವ ನಿಶ್ಚಯವನ್ನು ಕೇಳಿ ಭರತನ ಕೋಪವೆಲ್ಲ ಕರಗಿಹೋಯಿತು. 'ತಮ್ಮನಲ್ಲಿ ಏತಕ್ಕಾದರೂ ಹೀಗೆ ಮಾಡಿ ದೆನೋ!' ಎಂದು ಪಶ್ಚಾತ್ತಾಪ ಬಲವಾಯಿತು. ಆಗ, "ನೀನೊಬ್ಬನಪ್ಪಾ ನನಗುಳಿದಿರುವ ತಮ್ಮ; ಮನುವಂಶಕ್ಕೆ ಅಲಂಕಾರವಾಗಿರುವವನು. ಬೇಡಪ್ಪಾ. ನೀನೂ ತಪೋವನಕ್ಕೆ ಹೋದರೆ ಈ ಸಾಮ್ರಾಜ್ಯವನ್ನು ಯಾರಿ ಗಾಗಿ ಮೆರೆಯಲಿ?" ಎಂದು ಭರತನು ಕಣ್ಣೀರು ಕರೆಯತೊಡಗಿದನು; ಆ ಕಣ್ಣೀರಿನಿಂದ ಬಾಹುಬಲಿಯ ಕಾಲು ತೊಳೆಯುತ್ತಿದ್ದನು. ಬಾಹು ಬಲಿಗೂ ಕಣ್ಣೀರುಕ್ಕಿ ಬಂತು. ಅಣ್ಣನ ತಲೆಯ ಮೇಲೆ ಕಣ್ಣೀರ ಸರಿ ಸುರಿ ಸುತ್ತ ವಂಶಕ್ರಮವಾಗಿ ಬಂದ ರಾಜ್ಯಕ್ಕೆ ಆತನಿಗೆ ಅಭಿಷೇಕ ಮಾಡುತ್ತಿರು ವನೋ ಎಂಬಂತೆ ತೋರಿದನು.

ಹೇಗೆ ಹೇಗೋ ಭರತೇಶ್ವರನನ್ನೊಡಂಬಡಿಸಿ, ಮಹಾಬಲಿಯೆಂಬ ತನ್ನ ಮಗನಿಗೆ ಪಟ್ಟಗಟ್ಟಿ ಭಗವಂತನ ಸಮವಸರಣ ಮಂಟಪಕ್ಕೆ ನಡೆದನು. ಆದಿ ನಾಥನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, "ದೇವಾ, ಮೊದಲು ನನಗೆ ಯುವರಾಜಪದವಿಯನ್ನು ದಯಪಾಲಿಸಿದೆ. ಈಗ ವೈರಾಗ್ಯ ಮಾರ್ಗದ ಯುವ ರಾಜ ಪದವಿಯನ್ನು ಕರುಣಿಸು" ಎಂದು ಬೇಡಿ ದೀಕ್ಷೆಪಡೆದನು.

## ಭಗವಾನ್ ಬಾಹುಬಲಿ, ಪ್ರಿಯಧರ್ಮ ನೃಪತಿ

ಬಾಹುಬಲಿ ದೀಕ್ಷೆಯನ್ನು ಕೈಕೊಂಡಮೇಲೆ, ಗುರು ಉಪದೇಶಿಸಿದ ಶಾಸ್ತ್ರಗಳನ್ನು ಕಲಿತು, ವಿಧಿಸಿದ ಅನುಷ್ಠಾನಗಳನ್ನು ಮಾಡುತ್ತ ಕೆಲವು ಕಾಲ ಕಳೆದನು. ಕಡೆಗೆ ಒಂದು ಸಂವತ್ಸರದ ಅವಧಿ ಮಾಡಿಕೊಂಡು ಪ್ರತಿಮಾಯೋಗದಲ್ಲಿ ನಿಂತನು. ಹಾಗೆ ನಿಂತಾಗ ಕಾಲ ಬಳಿ ಹುತ್ತಗಳೆದ್ದವು. ಬಳ್ಳಿಗಳು ಹುಟ್ಟಿ ಮೈಮೇಲೆಲ್ಲ ಹಬ್ಬಿದವು. ಹುತ್ತದಿಂದ ಹೊರಟ ಹಾವು ಗಳು ಬಳ್ಳಿಗಳ ಮೇಲೆ ಹತ್ತಿ ಮುನಿಯ ಮೈಮೇಲೆಲ್ಲ ಓಡಾಡುತ್ತಿದ್ದವು. ಆ ವಿಷ ಸರ್ಪಗಳು ಮಹಾಮುನಿಯ ಘೋರ ತಪೋಗ್ನಿಯ ಧೂಮರೇಖೆಗಳೋ

ಎಂಬಂತೆ ತೋರುತ್ತಿದ್ದವು ಆ ಮುನಿಯನ್ನು ಮುಚ್ಚುವಂತೆ ಹಬ್ಬುತ್ತಿದ್ದ ಲತೆಗಳ ಹೆಣಿಗೆಯನ್ನು ಖೇಚರಿಯರು ಬಿಡಿಸುತ್ತಿದ್ದರು.

ಹೀಗೆ ಉಗ್ರೋಗ್ರವಾಗಿ ತಪಸ್ಸುಮಾಡುತ್ತಿದ್ದರೂ ಬಾಹುಬಲಿ ಮುನಿಗೆ ಕೇವಲ ಜ್ಞಾನ ಹುಟ್ಟಲಿಲ್ಲ. ಭರತನಿಗೆ ವಿಸ್ಮಯವಾಯಿತು. ಕಾರಣ ವೇನೆಂದು ಆದಿನಾಥನನ್ನು ಬೆಸಗೊಂಡನು. 'ಭರತನ ನೆಲದ ಮೇಲೆ ನಿಂತಿರುವೆನಲ್ಲಾ!' ಎಂದು ಅಳುಕುತ್ತ ಅಭಿಮಾನವನಿನ್ನೂ ಬಿಡದಿರುವುದರಿಂದ ಆತನಿಗೆ ಕೇವಲ ಜ್ಞಾನ ಹುಟ್ಟಲಿಲ್ಲವೆಂದೂ ಭರತನು ಹೋಗಿ ಕಾಲ್ಗೆರಗಿದರೆ ಕೇವಲ ಜ್ಞಾನವುಂಟಾಗುವುದೆಂದೂ ಆದಿತೀರ್ಥಂಕರನು ಅಪ್ಪಣೆಕೊಡಿಸಿದನು. ಅದನ್ನರಿತು ರಾಜಾಧಿರಾಜನು ಪರಿವಾರ ಸಮೇತನಾಗಿ ಬಂದು ಬಾಹುಬಲಿ ಮುನಿಯನ್ನು ಪೂಜಿಸಿ ಅಡಿಗೆರಗಿದನು. ಎರಗಿ, "ಅಯ್ಯಾ ಮುನಿಯೇ, ಈ ನೆಲ ನಿನ್ನದು. ನೀನು ಕೊಟ್ಟದ್ದರಿಂದ ನನಗೆ ಬಂತು. ನನ್ನದೆಂದೇಕೆ ಭಾವಿಸುವೆ? ನಿನ್ನನ್ನೇ ನೀನು ನೆನೆದುಕೊ. ಬೇರೆ ಏನನ್ನೂ ನೆನೆಯಬೇಡ" ಎಂದನು.

ಆ ಕೂಡಲೆ ಮನಸ್ಸಿನೊಳಗಿದ್ದ ಅಲ್ಪ ಸ್ವಲ್ಪ ಅಹಂಕಾರವೂ ನಾಶವಾಗಿ ಹೋಯಿತು. ಸರ್ವವನ್ನೂ ತಿಳಿಯುವಂತೆ ಪ್ರಕಾಶಿಸುವ ಕೇವಲ ಜ್ಞಾನ ತಲೆದೋರಿತು. ಬಾಹುಬಲಿ ಜಿನನಾದನು. ದೇವತೆಗಳು ಬಂದು ಬಾಹುಬಲಿ ಕೇವಲಿಯ ಅಡಿಗೆರಗಿ ಪೂಜಿಸಿ ಹೋದರು.

ಬಾಹುಬಲಿ ಕೇವಲಿ ನಾನಾ ದೇಶಗಳಲ್ಲಿ ವಿಹರಿಸಿ ಕೈಲಾಸಕ್ಕೆ ಬಂದು ಆದಿದೇವನ ಸನ್ನಿಧಿಯಲ್ಲಿದ್ದನು.

ಇತ್ತ ಭರತೇಶ್ವರನು ದಿಗ್ವಿಜಯಾನಂತರದಲ್ಲಿ ಅಯೋಧ್ಯೆಗೆ ಹಿಂದಿರುಗಿ ಸಾಮ್ರಾಜ್ಯಾಧಿಕಾರದಲ್ಲಿ ಪಟ್ಟಾಭಿಷಿಕ್ತನಾದನು; ಆದಿ ಚಕ್ರವರ್ತಿಯಾದನು. ಹಿಮವತ್ಪರ್ವತದಿಂದ ಲವಣ ಸಮುದ್ರದವರೆಗಿನ ಷಟ್ಖಂಡ ಭೂಮಂಡಲವೂ ಅವನ ಆಜ್ಞೆಗೆ ತಲೆಬಾಗಿ ನಡುಗುತ್ತಿತ್ತು ಮಾಗಧಾದಿ ಅಮರರು ಅವನನ್ನು ಓಲಗಿಸುತ್ತಿದ್ದರು. 'ಪ್ರಿಯಧರ್ಮ ನೃಪತಿ' ಎನಿಸಿದ ಚಕ್ರವರ್ತಿಯ ಕೀರ್ತಿ ಭೂಮ್ಯಾಕಾಶಗಳನ್ನೆಲ್ಲ ಬೆಳಗುತ್ತಿತ್ತು. ಧರ್ಮಪ್ರಿಯನಾದ ಆ ರಾಜನ ಮೇಲ್ಪಂಕ್ತಿಯಿಂದ ಸಮಸ್ತ ಭೂಮಂಡಲದಲ್ಲೂ ಪ್ರಜೆಗಳೆಲ್ಲ ಧರ್ಮಪ್ರಿಯರಾದರು.

ಹಿನ್ನುಡಿ

ತ್ರಿದಶಸ್ತುತ್ಯಮಿದಾದಿ ದೇವಚರಿತಂ ಕರ್ಣಾಮೃತಸ್ಯಂದಿಯ
ಕ್ಕಿದು ಭವ್ಯಾವಳಿಗೆಂದು ಪೇಳಿಸೆ ಬುಧರ್ ಸ್ವರ್ಗಾಪವರ್ಗಕ್ಕಮಾ
ಸ್ಪದಮಪ್ಪಾದಿ ಪುರಾಣ ವಸ್ತುಕೃತಿಯಂ ಪೇಳ್ದಂ ಬೆಡಂಗಪ್ಪಮಾ
ರ್ಗದೊಳಂ ದೇಸೆಯೊಳಂ ಪೊದಳ್ದೆಸೆವಿನಂ ಸಂಸಾರ ಸಾರೋದಯಂ

[“ಇದು ಆದಿದೇವನ ಚರಿತ್ರೆ; ದೇವತೆಗಳೆಲ್ಲ ಹೊಗಳುವಂಥದು. ಭವ್ಯಸಮೂಹದ (ಎಂದರೆ ಪುಣ್ಯವಂತರಾದ ಜೈನಭಕ್ತರ) ಕಿವಿಗೆ ಇದು ಅಮೃತವನ್ನೆರೆಯುವಂಥದಾಗಲಿ” ಎಂದು ಪಂಡಿತರು ಹೇಳಿಸಿದರು. ಸ್ವರ್ಗಮೋಕ್ಷಗಳಿಗೆ ಆಸ್ಪದವಾದದ್ದು ಆದಿಪುರಾಣ. ಅದರ ವಿಷಯವನ್ನು ಎತ್ತಿಕೊಂಡು ಚಮತ್ಕಾರವಾಗಿರುವ ಮಾರ್ಗವೂ (ಪ್ರೌಢಶಾಸ್ತ್ರ ರೀತಿ) ಸ್ವಾಭಾವಿಕವಾದ ದೇಸೆಯೂ (ನಾಡ ನುಡಿಕಟ್ಟು) ಹೊಂದಿಕೊಂಡು ಚೆನ್ನಾಗಿ ಕಾಣುವಂತೆ ಸಂಸಾರ ಸಾರೋದಯ(ನೆಂಬ ಬಿರುದುಳ್ಳ ಪಂಪ)ನು ಕಾವ್ಯವಾಗಿ ಹೇಳಿದನು.]

[ಈ ಕಥೆಯಲ್ಲಿ ವರ್ಣಿಸಿರುವ ಬಾಹುಬಲಿಯೇ ನಮ್ಮ ಗೊಮ್ಮಟೇಶ್ವರಸ್ವಾಮಿ. ಆ ಅದ್ಭುತ ಮನೋಹರ ಮೂರ್ತಿ ಅಂದು ಬಾಹುಬಲಿ ಪ್ರತಿಮಾಯೋಗದಲ್ಲಿ ನಿಂತ ರೀತಿಯನ್ನು ತೋರಿಸುತ್ತದೆ.

ಈ ಕಥೆಯನ್ನು ಕನ್ನಡದಲ್ಲಿ ಬರೆದವನು ನಮ್ಮ ಆದಿ ಕವಿ ಪಂಪ. ಆತ ಕನ್ನಡದ ಮೇಲಿನ, ಕನ್ನಡ ನಾಡಿನ ಮೇಲಿನ, ಅಕ್ಕರೆಯನ್ನು ಉಕ್ಕಿ ಹರಿಸಿದ್ದಾನೆ. ಆದಿಪುರಾಣ, ವಿಕ್ರಮಾರ್ಜುನ ವಿಜಯ ಎಂಬವು ಅವನು ರಚಿಸಿದ ಕೃತಿಗಳು. ಇಲ್ಲಿ ಕೊಟ್ಟಿರುವುದು ಆದಿಪುರಾಣದ ಕಥೆ. ವಿಕ್ರಮಾರ್ಜುನ ವಿಜಯದಲ್ಲಿ ಮಹಾಭಾರತದ ಕಥೆಯನ್ನು ವಿವರಿಸಿದ್ದಾನೆ. ಇದನ್ನು ‘ಪಂಪ ಭಾರತ’ ಎಂದು ಕರೆಯುವುದು ರೂಢಿ. ಇವೆರಡು ಗ್ರಂಥಗಳೂ ಆ ಕಾಲದ ಕನ್ನಡದಲ್ಲಿ—ಸಾವಿರ ವರ್ಷ ಹಿಂದಿನ ಹಳಗನ್ನಡದಲ್ಲಿ—ಬರೆದಿವೆ. ಅದರ ಸ್ವರೂಪವನ್ನು ಇಲ್ಲಿ ಕೊಟ್ಟಿರುವ ಎರಡು ಪದ್ಯಗಳಿಂದ ತಿಳಿದುಕೊಳ್ಳಬಹುದು.

ಪಂಪ ಒಳ್ಳೆಯ ಕವಿ ಮಾತ್ರವೇ ಅಲ್ಲ; ದೊಡ್ಡ ಪಂಡಿತನೂ ಹೌದು. ಅಷ್ಟೇ ಅಲ್ಲ; ರಾಜನ ದಂಡನಾಯಕನೂ ಆಗಿದ್ದನು. ನಾಡು, ನುಡಿ, ರಾಜಸೇವೆಗಳನ್ನು ಜನ ಮೆಚ್ಚುವಂತೆಯೂ ತನ್ನ ಮನಸ್ಸು ಮೆಚ್ಚುವಂತೆಯೂ ಮಾಡಿದ ಧನ್ಯಾತ್ಮ.
ಆತನಿಗೆ ಕವಿತಾಗುಣಾರ್ಣವ, ಸರಸ್ವತೀ ಮಣಿಹಾರ, ಸಂಸಾರ ಸಾರೋದಯ ಮೊದಲಾದ ಬಿರುದುಗಳಿದ್ದವು.

ಈ ಆದಿಪುರಾಣವನ್ನು ಕ್ರಿ. ಶ. ೯೪೧–೯೪೨ರಲ್ಲಿ ರಚಿಸಿದನೆಂದು ಪಂಡಿತರು ಗೊತ್ತುಮಾಡಿದ್ದಾರೆ.]

---

# ಕಣ್ಣಪ್ಪ

ಸಡಿ ಫಡ ! ಮಾನವರ್ ಕುಡುವರೆಂಬುದನಾಡದಿರೆನ್ನ ಮುಂದೆ ಕ
ಪ್ಪಡದ ಶರೀರಿಗಳ್ ತೃಣದ ಹಾಹೆಗಳಕ್ಕಟ ! ಮಣ್ಣ ಬೊಂಬೆಗಳ್
ಕುಡುವುವೆ ? ಬೇಡು, ಬೇಡಿದುದನೀವ ಮಹಾನಿಧಿಯಂ ಮಹೇಶನಂ
ಮೃಡನನನೂನದಾನಿಯನಲಂಪಿನ ಸೊಂಪಿನ ಹಂಪೆಯಾಳ್ದನಂ

[ 'ಮನುಷ್ಯರು ಕೊಡುತ್ತಾರೆ' ಎಂಬ ಮಾತನ್ನು ನನ್ನ ಮುಂದೆ ಆಡಬೇಡ. ಅವರು ಬಟ್ಟೆಯಲ್ಲಿ ಮಾಡಿಟ್ಟಿರುವ ಆಕಾರಗಳು ! ಹುಲ್ಲಿನ ಬಿಂಬಗಳು ! ಮಣ್ಣಿನ ಬೊಂಬೆಗಳು ! ಅವರೇನು ತಾನೆ ಕೊಟ್ಟಾರು ? ಬೇಡುವ ಹಾಗಿದ್ದರೆ, ಹಂಪೆಯೊಡೆಯನಾದ ಮಹೇಶ್ವರನನ್ನು ಬೇಡಿಕೊ. ಆ ಮಹೇಶ್ವರನು ಸಮಸ್ತ ಸುಖಕ್ಕೂ ನೆಲೆಯಾದವನು; ಮಹಾಮಹಿಮೆಯುಳ್ಳವನು; ಒಂದಿಷ್ಟೂ ಕುಂದಿಲ್ಲದ ದಾನಿ; ಬೇಡಿದ್ದನ್ನೆಲ್ಲಾ ಕೊಡುವ ಮಹಾನಿಧಿ. ಅಂಥ ಮಹೇಶ್ವರನನ್ನು ಬಿಟ್ಟು ಮನುಷ್ಯರನ್ನು ಬೇಡುವುದೆ ! ]

ಚೋಳ ಮಂಡಲ ಶಿವಭಕ್ತಿಗೆ ತವರುಮನೆಯಾಗಿದೆ. ಆ ದೇಶದಲ್ಲಿ 'ತಿರುಕಾಳತ್ತಿ' ಎಂಬೊಂದು ಪಟ್ಟಣ ('ಶ್ರೀ ಕಾಳಹಸ್ತಿ' ಎಂಬುದು ಇದರ ಸಂಸ್ಕೃತ ರೂಪ). ಅಲ್ಲಿ ಒಬ್ಬ ಬೇಡರ ನಾಯಕನಿದ್ದನು. ಅವನ ಹೆಸರು ಕಣ್ಣಪ್ಪ.

ಕಣ್ಣಪ್ಪನ ನಡೆ, ನುಡಿ—ಎಲ್ಲ ಬೇಡರಿಗೆ ತಕ್ಕಂತಿತ್ತು. ಎಲ್ಲ ಬಗೆಯ ಬೇಟೆಗಳಲ್ಲಿಯೂ ಅವನಿಗೆ ತುಂಬ ತಿಳಿವಳಿಕೆ. ಸದಾ ಬೇಟೆಯಲ್ಲಿಯೇ ಅವನಿಗೆ ಆಸಕ್ತಿ. ಸತ್ಯ ನುಡಿಯುವುದನ್ನು ಅವನು ಕನಸಿನಲ್ಲೂ ಕಂಡರಿಯ. ಶಿವನೆಂಬುದು ಆವನ ಮನಸ್ಸಿಗೂ ಹೊಳೆದಿರಲಿಲ್ಲ. ತನಗಿಂತ ಬೇರೆ ದೊಡ್ಡವರಿದ್ದಾರೆ ಎಂಬ ಸಂಗತಿಯೂ ಅವನಿಗೆ ಗೊತ್ತಿಲ್ಲ. ತಾನೇ ದೊಡ್ಡವನೆಂದುಕೊಂಡು ಬೇರೆ ಯಾರನ್ನೂ ಲಕ್ಷಿಸದೆ ತನಗೆ ಹಿತ ತೋರಿದಂತೆ ನಡೆದು ಬಿಡುತ್ತಿದ್ದನು. ಹಾಗೆ ನಡೆಯುವಾಗ ಸುಳ್ಳಾಡುವುದಕ್ಕೆ ಹಿಂಜರಿಯುತ್ತಿರಲಿಲ್ಲ. ಊಟ, ತಿಂಡಿ ಮೊದಲಾಗಿ ಏನೇ ಆಸೆ ಬರಲಿ, ಅದು ಸರಿಯೆ ತಪ್ಪೆ ಎಂದು ಸ್ವಲ್ಪವೂ ಯೋಚಿಸದೆ ಅದನ್ನು ಈಡೇರಿಸಿಕೊಳ್ಳಲು ಮುಂದೆ ನುಗ್ಗ

ತ್ತಿದ್ದನು. ಹಾಗೆ ಆಸೆಗಳಿಗೆ ಸಿಕ್ಕಿ ನಡೆಯುವಾಗ ಅವನಿಗೆ ತನ್ನ ಮೇಲೂ ಲಕ್ಷ್ಯವಿಲ್ಲ; ಬೇರೆ ಯಾವುದರ ಮೇಲೂ ಲಕ್ಷ್ಯವಿಲ್ಲ.

ಹೀಗಿದ್ದರೂ ಕಣ್ಣಪ್ಪ ನಿಜವಾಗಿಯೂ ಬಹು ದೊಡ್ಡ ಮನುಷ್ಯ; ತುಂಬ ಸಂಸ್ಕಾರ ಹೊಂದಿದ ಜೀವ. ಬೇಡತನದ ವೇಷ ಅವನ ನಿಜವಾದ ಯೋಗ್ಯತೆಯನ್ನು ಮುಚ್ಚಿ ಮರೆಮಾಡಿತ್ತು. ಸೂರ್ಯನಿಗೆ ಮೋಡ ಮುಚ್ಚಿದಂತಾಗಿತ್ತು ಅವನ ರೀತಿ. ಮೋಡವೆಲ್ಲ ಚೆದರಿ ಸೂರ್ಯಬಿಂಬ ಹೊಳೆ ಹೊಳೆಯುತ್ತ ಹೊರಬರುವ ಕಾಲವೂ ಹತ್ತಿರ ಬರುತ್ತಿತ್ತು.

ಕಣ್ಣಪ್ಪ ಬೇಟೆಗೆ ಹೊರಟಾಗ ಅವನ ರೂಪವನ್ನು ನೋಡಬೇಕು! ಜುಂಜುದಲೆ; ಕೆಂಗಣ್ಣು; ಗುಲಗಂಜಿಯ ಆಭರಣಗಳು. ತೊಡೆಗೆ ಚಲ್ಲಣ. ತಲೆ, ಕೈ ಮತ್ತು ತೊಡೆಗಳಲ್ಲಿ ಕವಡೆಯ ದಂಡೆಗಳು. ತೊಗಲಿನ ಉಡುಗೆಗಳನ್ನು ಬಿಗಿದುಟ್ಟಿದ್ದಾನೆ; ನಡುನಡುವೆ ಎಲುವಿನ ತುಂಡುಗಳನ್ನು ಸೆಕ್ಕಿಸಿದ್ದಾನೆ. ಉದ್ದನೆಯ ಹುರಿ ಕಟ್ಟಿ ಇಳಿಯ ಬಿಟ್ಟ ಚೌರಿ ಬೆನ್ನ ಮೇಲೆ ಆಳ್ಲಾಡುತ್ತಿದೆ. ಎತ್ತಿ ಕಟ್ಟಿದ ನೆತ್ತಿಗನ್ನಡಿ ಹೊಳೆಹೊಳೆಯುತ್ತಿದೆ. ಎಡಗೈಯಲ್ಲಿ ದೊಡ್ಡ ಬಿಲ್ಲು ಹಿಡಿದಿದ್ದಾನೆ. ಬೆನ್ನ ಮೇಲೆ ಬತ್ತಳಿಕೆಯಲ್ಲಿ ಕೂರಂಬುಗಳು ಗರಿಗೆದರುತ್ತಿವೆ. ಹೀಗೆ ಅಲಂಕಾರ ಮಾಡಿಕೊಂಡು ಬೇಡರ ಪಡೆಯನ್ನು ಸೇರಿಸಿಕೊಂಡು ಅಬ್ಬರಿಸುತ್ತ ಕಣ್ಣಪ್ಪ ಬೇಟೆಗೆ ಹೊರಟನೆಂದರೆ ಬೇಡರೆಲ್ಲರಿಗೂ ದೊಡ್ಡ ಹಬ್ಬ.

ಬೇಟೆಯ ದಿಟ್ಟರೆಲ್ಲ ಕಣ್ಣಪ್ಪನ ಹಿಂದೆ ಹೊರಡುವರು. 'ತಿರುಕಾಳತ್ತಿ' ಬೆಟ್ಟದ ತಪ್ಪಲಿನ ಕಾಡನ್ನೆಲ್ಲ ಅಲೆಯುವರು; ಮರೆಯಲ್ಲಡಗಿ ಮೃಗಗಳನ್ನು ಕಾಯುವರು; ಪೊದೆ ಮೊದಲಾದೆಡೆಗಳಲ್ಲಿ ಅಡಗಿದ್ದವನ್ನು ಬಡಿದೆಬ್ಬಿಸಿ ಸೋವಿ ತರುವರು. ಯಾವುದಾದರೂ ಮೃಗ ಸರಿಯಾದ ಸ್ಥಳದಲ್ಲಿ ಕಂಡು ಬಂತೆಂದರೆ ಆ ಕೂಡಲೆ ಕಣ್ಣಪ್ಪ ಸರಕ್ಕನೆ ನೆಗೆದು ನಿಲ್ಲುವನು. ನೀಟಡಿಯಿಟ್ಟು ಬಾಗಿ ನಿಂತು 'ಕುಬುಬು' ಎಂದು ಕೂಗಿ ಬಿಲ್ಲಿಗೆ ಹೆದೆಯೇರಿಸುವನು. ಹೆದೆಯನ್ನು ಬಲಗೈಯಿಂದ ಕಿವಿಯವರೆಗೆ ಎಳೆದು ತರುತ್ತಿರುವಷ್ಟರಲ್ಲೆ ಹೂಡಿರುವ ಕೂರಂಬು ತನ್ನನ್ನು 'ಬೇಗ ಬಿಡು, ಬಿಡು' ಎಂದು ತವಕಿಸುತ್ತಿರುವಂತೆ ತೋರುವುದು. ಅವನು ಬಿಟ್ಟ ಬಾಣವೇ ನಾಟುವುದೋ

ಅಥವಾ ಅವನ ನೋಟವೇ ಬಾಣವಾಗಿ ನಾಟುವುದೋ ಹೇಳಬಾರದಷ್ಟು ವೇಗ ಅವನೆಸುಗೆ. ಅವನ ಬಿಲ್ಲಿನ ಗುರಿಗೆ ಸಿಕ್ಕಿದ ಒಂದು ಮೃಗವೂ ತಪ್ಪಿ ಹೋಗದು. ಭಯಪಟ್ಟು ಓಡಿಯೂ ಹೋಗದು. ಮೃಗಗಳೆಲ್ಲ ಸಂತೋಷ ದಿಂದ ಅವನ ಅಂಬಿಗೆ ಮೈಯೊಡ್ಡುವುವು. ಕಣ್ಣಪ್ಪ ಅವನ್ನು ಮತ್ತೊಂದು ಅಡಿ ಮೆಟ್ಟಬಿಡದೆ ಹೊಡೆದುಹಾಕುವನು; ಅವುಗಳ ಜೀವ ಮರುಹುಟ್ಟು ಹುಟ್ಟದಂತೆ ನೆಟ್ಟನೆ ಸ್ವರ್ಗಕ್ಕೆ ನೆಗೆಯುವುವು. ಹೀಗೆ ಕಣ್ಣಪ್ಪನ ಬೇಟೆಯ ಲೀಲೆ ತಿರುಕಾಳತ್ತಿ ಮಲೆಯ ತಪ್ಪಲಲ್ಲೆಲ್ಲ ದನಿಗೊಡುತ್ತಿತ್ತು.

ಒಂದು ದಿನ ಕಣ್ಣಪ್ಪ ಬೇಟೆಗೆ ಹೊರಟಾಗ ಅವನಿಗೆ ಬಲಗಣ್ಣೂ ಬಲ ಹುಬ್ಬೂ ಅದುರಿತು. ಆಗ ಅವನು, 'ಇಂದು ಬೇಟೆ ಲೇಸಾಗುತ್ತದೆ' ಎಂದು ಕೊಂಡು ನಲಿದುಬ್ಬಿದನು. ಬಹಳ ಉತ್ಸಾಹದಿಂದ ಮುಂದುವರಿದು ನಡೆ ದನು. ಅದೇ ಸಮಯದಲ್ಲಿ ಇತ್ತ ತಿರುಕಾಳತ್ತಿ ಮಲೆಯಲ್ಲಿದ್ದ ಈಶ್ವರನು ಒಂದು ಮಾಯಾ ಮೃಗವನ್ನು ನಿರ್ಮಿಸಿ, 'ನೀನು ಕಣ್ಣಪ್ಪನೆದುರಿಗೆ ಸುಳಿದು ಅವನನ್ನು ನನ್ನ ಬಳಿಗೆ ಸೆಳೆದುಕೊಂಡು ಬಾ' ಎಂದು ಅಪ್ಪಣೆಮಾಡಿದನು. ಕೂಡಲೆ ಆ ಮೃಗ ಗಳಗಳನೆ ಬೆಟ್ಟದಿಂದ ಇಳಿದು ಬಂತು. ಬಂದು ದೂರದಲ್ಲಿ ಕಣ್ಣಪ್ಪನಿಗೆ ಕಾಣುವಂತೆ ಸುಳಿಯತೊಡಗಿತು. ಸ್ವಲ್ಪ ಹೊತ್ತು ಅತ್ತಿತ್ತ ಸುಳಿದಾಡುವುದು; ಸ್ವಲ್ಪ ಹೊತ್ತು ನಿಲ್ಲುವುದು; ಮತ್ತೆ ಅತ್ತಿತ್ತ ನಡೆದು ನಲಿದಾಡುವುದು. ಮೃಗದ ಸುಳಿದಾಟವನ್ನು ಕಂಡ ಕಣ್ಣಪ್ಪನಿಗೆ ಅದರ ಮೇಲೆ ತುಂಬ ಆಸೆಯಾಯಿತು. ಅದನ್ನು ಹೊಡೆಯ ಹೊರಟನು. ಮೃಗ ಛಂಗನೆ ನೆಗೆದು ಓಡತೊಡಗಿತು. ಕಣ್ಣಪ್ಪ ಅಟ್ಟಿಸಿಕೊಂಡು ಅದನ್ನು ಬೆಂಬತ್ತಿದನು.

ಮೃಗ ಒಮ್ಮೆ ತಿಟ್ಟು ಹತ್ತುವುದು; ಒಮ್ಮೆ ತಗ್ಗಿಗಿಳಿಯುವುದು. ಕೈಗೆ ಸಿಕ್ಕಿದಂತೆ ಮೆಲ್ಲನೆ ನಡೆಯುತ್ತಿದ್ದು ತಟಕ್ಕನೆ ಪಕ್ಕಕ್ಕೆ ಹೊರಳಿ ದಟ್ಟಡವಿ ಯನ್ನು ಹೊಕ್ಕುಬಿಡುವುದು. ಪೊದರುಗಳಲ್ಲೂ ಕತ್ತಲೆ ತುಂಬಿದ ಮೆಳೆ ಗಳಲ್ಲೂ ನುಸಳಿ ನುಸುಳಿ ನಡೆಯುವುದು. ಕಣ್ಣಪ್ಪ ಅದರ ಮೇಲೆಯೇ ಕಣ್ಣಿಟ್ಟು ಅದು ಹೋದೆಡೆಯಲ್ಲೆಲ್ಲ ಬಿಡದೆ ಹಿಂಬಾಲಿಸುವನು. ಹಳ್ಳಕೊಳ್ಳ ಗಳಲ್ಲೂ ಬಳ್ಳಿ ಹಾವಸೆ ಬೆಳೆದ ಮಡುಗಳಲ್ಲೂ ಬೆತ್ತದ ಬಿದಿರಿನ ಹಿಂಡಲು ಗಳಲ್ಲೂ ಕಲ್ಲು ಮೊರಡಿಗಳಲ್ಲೂ ಆ ಮೃಗ ಹೊಕ್ಕು ಸುತ್ತಿ ಸುತ್ತಿ ಓಡತೊಡ

ಗಿತು. ಕಣ್ಣಪ್ಪನೂ ಅದು ಹೊಕ್ಕಲ್ಲಿ ಹೊಕ್ಕು, ನೆಗೆದಲ್ಲಿ ನೆಗೆದು, ಓಡಿದಲ್ಲಿ ಬೆಂಬತ್ತಿ ಓಡಿ ಅದನ್ನು ಎಡೆಬಿಡದೆ ಅನುಸರಿಸುತ್ತಿದ್ದನು. ಅವನ ಮನಸ್ಸೂ ಕಣ್ಣೂ ಮೃಗದ ಮೇಲೆ; ಮನಸ್ಸಿನಲ್ಲಿ ಅತ್ಯಂತ ತವಕ; ಎಷ್ಟು ತವಕ ಪಟ್ಟರೂ ಮೈ ಹಿಂದೆ ಹಿಂದೆ. ಆದರೂ ಛಲದಿಂದ ಕಣ್ಣಪ್ಪನು ಆ ಮೃಗವನ್ನು ಮರೆಯಾಗಗೊಡದೆ ಬೆಂಬತ್ತಿದನು. ಕಡೆಗೆ ಅದು ಬೆಟ್ಟವನ್ನು ಹತ್ತಿ ಕಣ್ಣಪ್ಪನನ್ನು ಹಿಂದೆಯೇ ಎಳೆದುಕೊಂಡು ಶಿವನ ದೇವಾಲಯದ ಬಳಿ ಮಾಯವಾಯಿತು.

ಕಣ್ಣಪ್ಪ ಅಲ್ಲೆಲ್ಲ ಬಹಳ ಹೊತ್ತು ಹುಡುಕಿದನು. ಎಲ್ಲಿಯೂ ಕಾಣದಿರಲು ಅವನಿಗೆ ಕೋಪವೇರಿತು. ದಡದಡನೆ ದೇವಾಲಯದ ಬಳಿ ಬಂದು "ಎನ್ನವನೇ, ಎನ್ನವನೇ, ಕದ ತೆರೆ, ತೆರೆ" ಎಂದು ಒಂದೇ ಸಮನೆ ಕೂಗಲು ಮೊದಲುಮಾಡಿದನು. ತಟ್ಟನೆ ಕದ ತೆರೆಯಿತು. ಕಣ್ಣಪ್ಪ ಒಳ ಹೊಕ್ಕು ಲಿಂಗದ ಮುಂದೆ ನಿಂತು, "ನೋಡು ಮಾದೇವನೇ! ಕೇಳು ನನ್ನವನೇ! ಈಗ ನಾನು ನಿನ್ನ ಸತ್ಯವನ್ನು ನೋಡಿಬಿಡುತ್ತೇನೆ. ಹೋದ ಹುಲ್ಲೆಯನ್ನು ತೋರಿಸಿದರೆ ನೀನು ನನಗೆ ಒಳ್ಳೆಯವನು. ತೋರಿಸಿ ಕೊಟ್ಟರೆ ಅದರಲ್ಲಿ ನಿನಗೂ ಪಾಲು ಕೊಡುತ್ತೇನೆ. ನಾನೇನು ವಂಚನೆ ಮಾಡುವುದಿಲ್ಲ. ನಿನ್ನ ಪಾಲನ್ನು ನೀನು ತೆಗೆದುಕೊ" ಎಂದು ಕೇಳಿಕೊಂಡನು. ಈಶ್ವರನಿಗೆ ನಗು ಬಂತು. ನಕ್ಕು, "ಇವನ ಮೇಲೆ ನನಗೆ ಕಡು ಮೋಹ" ಎಂದುಕೊಂಡು ಕಣ್ಣಪ್ಪನಿಗೆ ಮೃಗವನ್ನು ತೋರಿಸಿದನು.

ಕಂಡು ಕಣ್ಣಪ್ಪನಿಗೆ ಪರಮಾನಂದವಾಯಿತು. "ಅಯ್ಯಯ್ಯ! ಇಂಥ ಸತ್ಯವನ್ನು ಕಂಡೆನಲ್ಲ! ಕೈಯ ಮೇಲೆಯೇ ತೋರಿಸುವ ಒಡೆಯನನ್ನು ಕಂಡುಬಿಟ್ಟೆ! ಅಯ್ಯಾ, ಇನ್ನು ನಿನ್ನನ್ನಗಲುವುದಿಲ್ಲ. ಇದುವರೆಗೂ ನಿನ್ನ ವಿಚಾರ ತಿಳಿದಿರಲಿಲ್ಲ. ತಿಳಿಯದೆ ಕೆಟ್ಟೆ. ತಿಳಿದ ಮೇಲೆ ಇನ್ನು ಬಿಟ್ಟೇನೇ? ನನಗಿರುವವನು ನೀನು; ನಿನಗಿರುವವನು ನಾನು. ಇಷ್ಟು ದಿಟವುಳ್ಳ ನಿನ್ನನ್ನು ಎಂದಿಗೂ ಬಿಟ್ಟುಹೋಗುವುದಿಲ್ಲ. ಇಂದು ಮೊದಲಾಗಿ ನಿನ್ನ ಹೆಜ್ಜೆಯನ್ನು ಬಿಟ್ಟಗಲುವುದಿಲ್ಲ ನಾನು. ರಸ ಬಸಿಯುವ ಹೊಸ ಮಜ್ಜೆಯನ್ನು ತಂದು ಕೊಡುತ್ತೇನೆ. ಸಂಜೆಯಾದ ಮೇಲೆ ನಿನ್ನನ್ನು ಒಂಟಿಯಾಗಿ ಬಿಟ್ಟುಹೋಗು

ವುದಿಲ್ಲ. ಅಂಜ ಬೇಡ; ಚಿಂತಿಸಬೇಡ" ಎಂದು ಅನೇಕ ಬಗೆಯಾಗಿ ಹಿಗ್ಗಿನಿಂದ ಹೇಳುತ್ತ ಕುಣಿದಾಡಿದನು.

ಆಮೇಲೆ ಹುಲ್ಲೆಯನ್ನು ಹೊಡೆದು ಬಾಣಸಮೇತವಾಗಿ ಅದನ್ನು ದೇವಾಲಯಕ್ಕೆ ತಂದನು. ತಂದು, "ದೇವಾ, ನೋಡು. ನಾನೇನು ಹುಸಿಯುವುದಿಲ್ಲ. ನಿನ್ನ ಮುಂದಿಟ್ಟು ಸರಿಯಾಗಿ ಹಂಚುತ್ತೇನೆ. ನಂಬು, ನನ್ನಲ್ಲಿ ಮಾಯೆಯಿಲ್ಲ, ನನ್ನವನೇ" ಎಂದು ಪ್ರಿತಿಯಿಂದ ನುಡಿಯುತ್ತ ಹುಲ್ಲೆಯನ್ನು ಕತ್ತರಿಸಿ ಸರಿಯಾಗಿ ಪಾಲುಮಾಡಿಟ್ಟನು. ಇಟ್ಟು, "ನಿನಗೆ ಯಾವುದು ಬೇಕೋ ಅದನ್ನು ತೆಗೆದುಕೊ" ಎಂದು ಒಳ್ಳೆಯ ಭಾಗವನ್ನೇ ಶಿವನಿಗೆ ಒಪ್ಪಿಸಿದನು. "ನಿನ್ನ ಭಾಗವನ್ನು ಯಾರ ಕೈಗೂ ಕೊಡುವುದಿಲ್ಲ. ನಾನೇ ಕಾಸಿ ಲೇಸುಮಾಡಿ ಕೊಡುತ್ತೇನೆ" ಎಂದು ತಿಳಿಸಿ ಬೆಂಕಿ ಹೊತ್ತಿಸಿದನು. ಮಾಂಸಖಂಡಗಳನ್ನು ಬಿಡಿಸಿ ಕೋಲಿಗೆ ಚುಚ್ಚಿ ಬೆಂಕಿಗೆ ಹಿಡಿದು ಕಾಸಿ ಪಕ್ವಮಾಡಿದನು. ಕೆಂಪಾದ, ಸೊಂಪಾದ, ಕಂಪುಳ್ಳ ಖಂಡಗಳನ್ನೇ ಆಯ್ದಾಯ್ದು ಕಾಸಿ ತೆಗೆತೆಗೆದು ರುಚಿನೋಡಿ ಇಂಪಾಗಿ, ಮೃದುವಾಗಿ ಕಂಡವನ್ನು ಬೇರೆ ಇರಿಸಿದನು. ಬಳಿಕ ಮುತ್ತುಗದ ಎಲೆಯನ್ನು ಹಚ್ಚಿ ಅದರಲ್ಲಿ ಖಂಡಗಳನ್ನಿಟ್ಟುಕೊಂಡು ಶಿವನ ಬಳಿಗೆ ತಂದನು. "ಎನ್ನವನೇ ಉಣ್ಣು, ಉಣ್ಣು" ಎಂದು ಕೇಳಿಕೊಂಡನು. "ಎನ್ನವನೇ, ಸವಿನೋಡು. ನನ್ನಾಣೆ, ನಿನ್ನಾಣೆ" ಎಂದು ಅಂಗಲಾಚಿದನು.

ಅವನ ಭಕ್ತಿ ಶಂಕರನಿಗೆ ಸೊಗಸಿತು. ಭಕ್ತನನ್ನು ತೃಪ್ತಿ ಪಡಿಸಬೇಕೆಂದು, ಅವನು ಅರ್ಪಿಸಿದ ಮಾಂಸವನ್ನು ತಾನೇ ಕೈಕೊಂಡ ಹಾಗೆ ಕಾಣಿಸಿದನು. ಆ ಖಂಡಗಳನ್ನೆಲ್ಲ ಭೂತಗಳಿಗೆ ಕೊಟ್ಟು ಅವನ ನಿರ್ಮಲವಾದ ಭಕ್ತಿಯನ್ನೂ ಆತುರದ ಪ್ರೇಮವನ್ನೂ ತಾನು ಸ್ವೀಕರಿಸಿದನು. ಭಕ್ತನ ಮನಸ್ಸಿಗೆ ಶಿವನೇ ಉಂಡಂತೆ ಭಾವನೆ. ಶಿವನು ಭಕ್ತಿಯನ್ನು ಸವಿಸವಿದು ತೇಗುತ್ತಿದ್ದನು. ಹೀಗೆ ಶಿವನು ಆರೋಗಿಸುತ್ತಿರುವುದನ್ನು ಕಂಡು ಕಣ್ಣಪ್ಪನಿಗೆ ಮನಸ್ಸು ಮರುಗಿತು. "ತಂದೇ, ಇಷ್ಟು ದಿನವೂ ಅಡವಿಯಲ್ಲಿ ಒಬ್ಬನೇ ಇದ್ದೆಯಲ್ಲಾ! ನಿನ್ನನ್ನು ನೋಡಿಕೊಳ್ಳುವವರು ಯಾರೂ ಇಲ್ಲವಲ್ಲಾ! ಹಲವುಪಾಸಗಳಲ್ಲಿ ಒಂದೂಟವನ್ನು [illegible] ಇನ್ನು ನಿನ್ನನ್ನು ನಾನು ಸಲಹುತ್ತೇನೆ" ಎಂದು [illegible] ನುಡಿದನು.

ರಾತ್ರಿಯಾಯಿತು. ಕಣ್ಣಪ್ಪ ಸುತ್ತಣ ಪೊದೆಗಳಲ್ಲಿ ಹುಡುಕಿ ಪುರಲೆಗಳನ್ನಾಯ್ದು ಹೊರೆಕಟ್ಟಿ ಹೊತ್ತು ತಂದನು; ಶಿವನಿಗೆ ಬೆಳಕು ಬೇಕೆಂದು ಮುಂದೆ ಬೆಂಕಿಯೊಟ್ಟಿದನು. ಒಟ್ಟಿ, "ತಂದೇ, ನೀನಿನ್ನು ನಿದ್ದೆಮಾಡು. ಯಾವ ದುಗುಡವೂ ಬೇಡ. ನಾನು ಕಾವಲಾಗಿರುತ್ತೇನೆ. ಭಯಪಡಬೇಡ" ಎಂದು ಶಿವನನ್ನು ನಿದ್ದೆಮಾಡಿಸಿದನು. ಆಮೇಲೆ ಮೆಲ್ಲನೆ ದೇವಾಲಯದ ಹೊರಕ್ಕೆ ಬಂದು ಸದ್ದುಮಾಡುತ್ತಿದ್ದ ಹಕ್ಕಿಗಳನ್ನೆಲ್ಲ ಎಬ್ಬಿಸಿ ಓಡಿಸುವನು. "ಸದ್ದಿನಿಂದ ನಿದ್ದೆಗೆಟ್ಟರೆ ನನ್ನವನಿಗೆ ನಾಳೆ ಸರಿಯಾಗಿ ಹಸಿವಾಗುವುದಿಲ್ಲ. ಹಸಿವಿಲ್ಲದೆ, ಏನೂ ಉಣ್ಣದೆ ಹಾಗೇ ಇದ್ದುಬಿಡುತ್ತಾನೆ" ಎಂದುಕೊಂಡು ಸುತ್ತ ಕಣ್ಣಿಟ್ಟು ನೋಡುತ್ತಿರುವನು. ಅಲ್ಲಿ ಬಂದ ಮೃಗಗಳನ್ನೆಲ್ಲ ದಿಕ್ಕುದಿಕ್ಕಿಗೂ ಚೆದರಿ ಓಡುವಂತೆ ಹೊಡೆದಟ್ಟುವನು. ಹಕ್ಕಿಗಳ ನುಣ್ದನಿಗಳನ್ನೂ ನಿಲ್ಲಿಸಿಬಿಡುವನು. ಒಳಕ್ಕೆ ಬಂದು ಶಿವ ನಿದ್ದೆ ಮಾಡುತ್ತಿರುವನೋ ಇಲ್ಲವೋ ಎಂದು ಆಲಿಸುವನು. ಬಳಿಕ ಹೊರಹೊರಟು ಹೊರದನಿಗಳನ್ನಾಲಿಸುವನು. ತಿರುಗಿ ಒಳಹೊಕ್ಕು ಉಸಿರನ್ನಾಲಿಸಿ, "ಪಾಪ, ಬಳಲಿದ್ದಾನೆ, ನಿದ್ದೆ ಮಾಡಪ್ಪ" ಎನ್ನುವನು. ಹೀಗೆ ಒಳಕ್ಕೂ ಹೊರಕ್ಕೂ ಓಡಾಡುತ್ತ ಶಿವನ ನಿದ್ದೆಗೆ ಭಂಗ ಬರದಂತೆ ಕಾವಲು ಕಾಯುವುದರಲ್ಲಿ ಬೆಳಗಾಗುವವರೆಗೂ ಎಚ್ಚತ್ತಿದ್ದು ಜಾಗರಣೆ ಮಾಡಿದನು.

ಬೆಳಗಾಗಿ ಶಿವನು ಉಪ್ಪವಡಿಸಲು ನೋಡಿ ನಲಿದಾಡಿದನು. "ನಿದ್ದೆ ತಿಳಿದೆದ್ದೆಯಾ, ಎನ್ನವನೇ? ಹಸಿದೆಯಯ್ಯಾ. ಹೊಸ ಮಾಂಸವನ್ನು ತರಲು ಹೋಗುತ್ತೇನೆ. ಎನ್ನವನೇ, ಬಲು ಬೇಗ ಬಂದುಬಿಡುತ್ತೇನೆ, ನೋಡು. ನಿನ್ನಾಣೆ, ತಡಮಾಡುವುದಿಲ್ಲ. ನಾನೊಂದು ಕಡೆಯೂ ನಿಲ್ಲುವುದಿಲ್ಲ" ಎಂದು ಸಂತಯಿಸಿ ಹೊರಹೊರಟನು. ಪ್ರೀತಿ ಉಕ್ಕಿ ಬಂತು. ಬಿಟ್ಟು ಹೋಗಲು ಮನಸ್ಸು ಹೊಯ್ದಾಡತೊಡಗಿತು. ಎರಡು ಮೂರು ಹೆಜ್ಜೆ ಇಟ್ಟು ತಿರುಗಿಬಂದು, "ಎನ್ನವನೇ, ಚಿಂತೆ ಮಾಡಬೇಡ. ಇಗೋ, ಈಗ ಬಂದುಬಿಡುತ್ತೇನೆ ನೋಡು" ಎಂದು ಸಮಾಧಾನ ನುಡಿಯುವನು. ಅಪ್ಪಿ, ಮುದ್ದಾಡಿ ಕೊಂಡಾಡುವನು. ಅಗಲಲಾರದೆ ಅಲ್ಲಿ ಇರಲೂ ಆರದೆ ಸಂಕಟಪಡುವನು. ಅವನ ಸ್ನೇಹ ಎಷ್ಟೆಂದು ಹೇಳೋಣ! ಕಡೆಗೆ ಹೇಗೋ ಮನಸ್ಸು ಬಿಗಿಹಿಡಿದುಕೊಂಡು ಹೊರಹೊರಟನು. ತಿರುತಿರುಗಿ ಹಿಂದೆ ನೋಡುತ್ತಲೇ

ಮುಂದುವರಿದನು. ಶಿವಲಿಂಗ ಕಣ್ಮರೆಯಾಗಲು ಕಂದಿ ಕುಂದಿಹೋದನು. ಶಿವನನ್ನೇ ನೆನೆಯುತ್ತ ಶಿವನಿಗೆಂದು ಮೃಗವನ್ನರಸುತ್ತಿದ್ದನು.

ಕಣ್ಣಪ್ಪ ಅತ್ತ ಹೋದ ಮೇಲೆ ಊರಿನಿಂದ ಶಿವನನ್ನು ಪೂಜಿಸುವುದಕ್ಕಾಗಿ ಒಬ್ಬ ಬ್ರಾಹ್ಮಣ ಇತ್ತ ಬಂದನು. ಮೈಗೆ ವಿಭೂತಿಯನ್ನು ಪೂಸಿದ್ದಾನೆ; ರುದ್ರಾಕ್ಷಿಮಾಲೆಗಳನ್ನು ಧರಿಸಿದ್ದಾನೆ. ಕೈಯ್ಯಲ್ಲಿ ಕರಡಿಗೆ, ಅಗ್ಗವಣಿ. ಆತ ಮೆಲ್ಲಮೆಲ್ಲನೆ ಬೆಟ್ಟವನ್ನು ಹತ್ತುತ್ತ ದೇವಾಲಯದ ಬಾಗಿಲಿಗೆ ಬಂದನು. ಗವಲು ಕವಿದು ಬಂತು. ಆ ಹೊಲಸು ವಾಸನೆ ಮೂಗಿಗಡರಲು 'ಇದೆಲ್ಲಿಯ ಅದ್ಭುತವಪ್ಪಾ' ಎಂದುಕೊಂಡು ಗುಡಿಯ ಬಾಗಿಲಿನಿಂದ ಹಿಂದಿರುಗಿ ಬಂದು ಕರಡಿಗೆಯನ್ನೂ ಅಗ್ಗವಣಿಯನ್ನೂ ಒಂದು ಕಡೆ ಇಟ್ಟನು. ಹೇಸಿ ಅಸಹ್ಯಪಟ್ಟುಕೊಂಡು ಉಗುಳಿ ಮೂಗು ಮುಚ್ಚಿಕೊಂಡನು. 'ಎಲ್ಲಿಯ ದುರಾಚಾರ ಬಂತೋ! ಶಂಕರನಿಗೆ ಎಂಥ ಜುಗುಪ್ಸೆಯುಂಟಾಯಿತೋ!' ಎಂದು ಪೇಚಾಡುತ್ತ ಮೂಗು ಮುಚ್ಚಿಕೊಂಡೇ ಒಳಕ್ಕೆ ಬಂದನು. ಬಂದು, "ಎಲೆ ದೇವ, ಇಂಥ ಪಾಪಕರ್ಮ ಮಾಡುವ ಕಟುಕನನ್ನು ಒಳಕ್ಕೆ ಬರಗೊಡಿಸುವುದೆ? ಏನಯ್ಯ, ಎಲ್ಲಿದ್ದೆ? ಏನಾದೆ, ಎಲೆ ದೇವ?" ಎಂದು ನುಡಿಯುತ್ತ ಪೊರಕೆಯಿಂದ ಗುಡಿಸಿ, ಗೋಮಯವಿಕ್ಕಿ ಶುಚಿಮಾಡಿದನು. ತರುವಾಯ ಕೊಳಕ್ಕೆ ಹೋಗಿ ಮತ್ತೊಮ್ಮೆ ಮಿಂದು, 'ಶಿವ ಶಿವ' ಎಂದು ನೆನೆಯುತ್ತ ಬಂದು ಅಗ್ಗವಣಿಯನ್ನೂ ಕರಡಿಗೆಯನ್ನೂ ತೆಗೆದುಕೊಂಡು ಶಿವಾಲಯದ ಒಳಹೊಕ್ಕನು.

"ಶುದ್ಧಾತ್ಮ ಶಿವಾ, ಹೀಗೆ ಮಾಡಿಸುವುದೇ? ನಿರ್ಮಲ ಪ್ರಭುವೇ, ಹೀಗೆ ಮಾಡಿಸುವರೇ?" ಎನ್ನುತ್ತ ಭಯಭಕ್ತಿಯಿಂದ ಕಾಳತ್ತಿಯರಸನಿಗೆ ಅಭಿಷೇಕ ಮಾಡಿದನು. ಬಿಲ್ವಪತ್ರೆ, ಗರುಗ, ಉತ್ತರಣೆ, ದೊಡ್ಡಪತ್ರೆ, ಬಿಳಿಯ ಗರುಕೆ ಮೊದಲಾದ ಬಗೆಬಗೆಯ ಪತ್ರಗಳನ್ನು ತಂದೊಟ್ಟಿ ಸಜ್ಜನಸ್ನೇಹಭರಿತನಾದ ಪರಮಾತ್ಮನಿಗೆ ಪೂಜೆ ಮಾಡಿದನು. ರುದ್ರಸೂಕ್ತಗಳನ್ನು ಪಠಿಸಿ ಹಲವು ಜಪಗಳನ್ನು ಮಾಡಿದನು. ಧೂಪಾರತಿಯೆತ್ತಿ ನೈವೇದ್ಯವನ್ನು ಸಮರ್ಪಿಸಿ, "ಕಾಪಾಲೀ, ಶರಣು" ಎಂದು ಅಡ್ಡಬಿದ್ದನು. "ಈ ಪಶುಕರ್ಮಕಾರನನ್ನು ಹೊಗಿಸಬೇಡ, ಕಂಡೆಯಾ. ಹೇಸಿಗೆ ಮಾಡುವ ಕಿರಾತನನ್ನು ಹೋಗಿಸಬೇಡ, ಕಂಡೆಯಾ" ಎಂದು ಬೇಡಿಕೊಂಡನು. "ಚಂದ್ರಶೇಖರಾ,

ಕರುಣಿಸು" ಎಂದು ಕೈಮುಗಿದು ನಿಂತನು. ಹೀಗೆ ಪೂಜೆಯನ್ನು ಮುಗಿಸಿ ಗರ್ಭಗೃಹ, ಸುಕನಾಸಿ, ರಂಗಮಂಟಪದ ಹೊರಮುಖ— ಈ ಮೂರು ಬಾಗಿಲುಗಳ ಕದಗಳನ್ನೂ ಮುಚ್ಚಿ ಸರಪಣಿ ಸೇರಿಸಿ ಬಿಗಿಯಾಗಿ ಬೀಗ ಹಾಕಿದನು. "ಶಂಕರಾ, ಇನ್ನು ಅವನನ್ನು ಒಳಹೊಗಿಸಬೇಡ" ಎಂದು ಮತ್ತೆ ಮತ್ತೆ ಪ್ರಾರ್ಥಿಸುತ್ತ ಪಟ್ಟಣಕ್ಕೆ ಹಿಂದಿರುಗಿ ಹೋದನು.

ಇತ್ತ ಬೇಡರ ಕಣ್ಣಪ್ಪ ಮೃಗವನ್ನು ಹುಡುಕಿಕೊಂಡು ಕಾಡಿನಲ್ಲೆಲ್ಲ ಅಲೆಯುತ್ತಿದ್ದನು. "ಎನ್ನವನು ಹಸಿದನು" ಎಂದು ಮನಸ್ಸಿನಲ್ಲಿ ಸದಾ ದುಗುಡ. ಆದರೂ ಸಿಕ್ಕಿ ಸಿಕ್ಕಿದ ಮೃಗವನ್ನು ಹೊಡೆಯಲೊಲ್ಲ. ಬಾಡಿದ ಮೃಗಗಳನ್ನೂ ರೋಗದ ಮೃಗಗಳನ್ನೂ ಕಂಡರೆ, "ಇವು ಹೊಲ್ಲ; ಎನ್ನವನ ಹೊಟ್ಟೆಗಾಗುವುದಿಲ್ಲ; ಬೇಡ" ಎಂದುಕೊಂಡು ಅಂಬೆಸೆಯದೆ ಸುಮ್ಮನೆ ನಿಲ್ಲುವನು. "ಬಾಳ್ಗೆ ಎನ್ನ ಮಾದೇವ" ಎನ್ನುತ್ತ ಹುಡುಕಾಡುತ್ತಿರುವಲ್ಲಿ ಅಷ್ಟಾಂಗ ಪುಷ್ಟವಾಗಿದ್ದ ಒಂದು ಮೃಗವನ್ನು ಕಂಡು ಮನಸ್ಸಿಗೆ ಒಪ್ಪಾಗಲು ಬಾಣಬಿಟ್ಟನು. ಆ ಮೃಗ ನೆಲಕ್ಕೆ ಬೀಳುವ ಮೊದಲೇ ಓಡಿಹೋಗಿ ಹಿಡಿದೆತ್ತಿಕೊಂಡನು. "ನೆಲಕ್ಕೆ ಸೋಕಿದರೆ ನನ್ನೊಡೆಯ ಹೇಸುವನು" ಎಂದು ಕಲ್ಬಾಳೆಯೆಲೆಗಳನ್ನು ಕೊಯ್ದು ಬೆಳೆದ ಹಸಲೆಯ ಮೇಲೆ ಹಾಸಿ ಅಲ್ಲಿ ಮೃಗವನ್ನಿಟ್ಟು ಎಲೆ ಮುಚ್ಚಿದನು. "ಗಾಳಿ ತಾಗಿದರೆ ಒಲ್ಲ; ಎನ್ನವನು ಸುಖಿ" ಎಂದುಕೊಳ್ಳುವನು. ಆಮೇಲೆ ಎಳೆಯ ಮಾವಿನ ಮರದ ಕೆಳಗೆ ತಂದಿಟ್ಟುಕೊಂಡು ಮುತ್ತುಗದ ಎಲೆಗಳನ್ನು ಹಾಸಿ ಮೃಗವನ್ನು ಕೊಯ್ದು ಖಂಡಗಳನ್ನು ಬಿಡಿಸಿಟ್ಟನು. ಬೆಂಕಿಯೊಟ್ಟಿ ಕಾಸಿ ಪಕ್ವಮಾಡಿದನು. "ಕಾವು ಹೆಚ್ಚಾಯಿತು; ಇದು ಸೀದುಹೋಯಿತು" ಎಂದು ಬೇರೆ ಇರಿಸುವನು. ಮೃದುವಾದವನ್ನು ಕೈಯಿಂದ ಮುಟ್ಟಿ ಮುಟ್ಟಿ ಪರೀಕ್ಷಿಸುವನು; ಚೆಲುವಾದುವನ್ನು ಕಣ್ಣುಗಳಿಂದ ನೋಡಿ ನೋಡಿ ಪರೀಕ್ಷಿಸುವನು; ಕಂಪುಳ್ಳವನ್ನು ಮೂಸಿ ಮೂಸಿ ಶೋಧಿಸುವನು; ಇಂಪುಳ್ಳವನ್ನು ನಾಲಿಗೆಯಿಂದ ರುಚಿನೋಡಿ ಶೋಧಿಸುವನು. ಹೀಗೆ ಸರ್ವೇಂದ್ರಿಯಗಳಿಂದಲೂ ಶೋಧಿಸಿ ನೋಡಿ ಉತ್ತಮವಾಗಿ ಕಂಡವನ್ನು ಮಾತ್ರ ಶಿವನಿಗೆಂದು ತೆಗೆದಿಟ್ಟುಕೊಂಡನು. ಬಳಿಕ, ಕಾಡುಮೊಲ್ಲೆಯ ಹೂವುಗಳನ್ನು ಕೊಯ್ದು ತಲೆಯ ಮೇಲಿಟ್ಟುಕೊಂಡನು. ಬಾಯಲ್ಲಿ ಅಗ್ಗವಣಿಯನ್ನು ತುಂಬಿಕೊಂಡನು.

ಒಂದು ಕೈಯಲ್ಲಿ ಮಾಸಲೋಗರ— ಸ್ನೇಹದಿಂದ ಆಯ್ದಿಟ್ಟ ಮಾಂಸ—, ಇನ್ನೊಂದು ಕೈಯಲ್ಲಿ ಬಿಲ್ಲು ಬಾಣಗಳು. ಹೀಗೆ ಸಿದ್ಧನಾಗಿ ಗುಡಿಗೆ ಹಿಂದಿರುಗಿದನು.

ದಾರಿಯಲ್ಲಿ ನಾನಾ ಬಗೆಯ ಚಿಂತೆ : " ಎನ್ನವನು ಹಸಿದ; ಇರಲಾರ. ಬಹಳ ತಡಮಾಡಿದೆನೆಂದು ಕೋಪಿಸುತ್ತಾನೆ. ಹೊತ್ತು ಹೋಯಿತೆಂದು ನನ್ನ ಬರವನ್ನೇ ಹಾರಯಿಸುತ್ತಿರುವನೇನೋ? ನಾನು ಹೊತ್ತುಕಳೆದೆ; ಪಾಪಿಯಾದೆ. ತುಂಬ ಹಸಿದು ಎದುರಿಗೆ ಬರುತ್ತಿದ್ದಾನೋ ಏನೋ? ಹುಲಿ ಬಂದರೆ ಅಂಜಿ ಹೊರಕ್ಕೆ ಬರಲಾರದೆ ಇರುವನೇನೋ? ಕರಡಿ ಗರ್ಜಿಸಿದರೆ ಹೆದರಿ ಮಾತಾಡದೆ ಸುಮ್ಮನಿರುವನೇನೋ? ಒಂಟಿಯಾಗಿ ಬೇಸರಪಟ್ಟಿರುವನೋ ? ' ತಮ್ಮವರನ್ನು ನೆನೆದು ನನ್ನನ್ನು ತೊರೆದುಬಿಟ್ಟ' ಎಂದು ಅಳುವನೋ ? ನೊಂದುಕೊಂಡು ನನ್ನ ಮೇಲೆ ಮುನಿದಿರುವನೋ ? " ಎಂದು ಮುಂತಾಗಿ ಪ್ರೀತಿಯ ಹೆಚ್ಚಿಗೆಯಿಂದ ಚಿಂತಿಸತೊಡಗಿದನು.

ಚಿಂತಿಸುತ್ತಲೇ ದೇವಾಲಯದ ಬಳಿ ಬಂದು ಸೇರಿದನು. ಬಾಗಿಲಿಗೆ ಭದ್ರವಾಗಿ ಬೀಗ ಹಾಕಿದೆ. " ಎನ್ನವನೇ ಕದ ತೆರೆ " ಎಂದು ಅವನು ನುಡಿಯಬೇಕು ; ಅಷ್ಟರೊಳಗಾಗಿ, ಹಾಗೆ ನುಡಿಯುವುದಕ್ಕಿಂತ ಮುಂಚೆಯೇ ಢಣಢಣನೆ ಬೀಗ ಬಿಚ್ಚಿ ಬಾಗಿಲು ತೆರೆಯಿತು. ಕಣ್ಣಪ್ಪ ಒಳಹೊಕ್ಕು " ಒಬ್ಬನೇ ಇದ್ದೆಯಲ್ಲಾ, ತಂದೇ " ಎಂದುಕೊಂಡು ಲಿಂಗದ ಮೇಲಿದ್ದ ಪೂಜೆಯ ಹೂವು ಮೊದಲಾದುವನ್ನೆಲ್ಲ ಕೆರದ ಕಾಲಿನಿಂದಲೆ ಒತ್ತರಿಸಿದನು. ಬಳಿಕ ಪ್ರೀತಿಯಿಂದ ಬಾಯೊಳಗಿನ ಅಗ್ಗವಣಿಯಿಂದ ಮಜ್ಜನಕ್ಕೆರೆದನು. ತನ್ನ ತಲೆಯ ಮೇಲಿದ್ದ ಹೂವುಗಳಿಂದ ಪೂಜೆಮಾಡಿದನು. ಹೊಸ ಮಾಂಸ ದೋಗರವನ್ನು ತಂದು ಮುಂದಿರಿಸಿ, " ಎನ್ನವನೇ, ಎನ್ನವನೇ ! ಹಸಿದೆಯಪ್ಪಾ, ಹಸಿದೆ. ಓಹೋ ಹೋ, ಹೊತ್ತಾಗಿ ಹೋಯಿತು ! ಎನ್ನವನೇ, ಚೆನ್ನವನೇ, ಉಣ್ಣು. ಹೊತ್ತಾಯಿತೇ, ಎನ್ನಯ್ಯಾ ? ಉಣ್ಣದನೆ ದಮ್ಮಯ್ಯ" ಎಂದು ಪರಿಪರಿಯಾಗಿ ಬೇಡಿದನು. ಶಿವನು ಉಣ್ಣದಿರಲು, "ಹೋ, ಗೊತ್ತಾಯಿತು. ನಾಚಿಕೊಂಡಿದ್ದೀಯ, ನೀನು " ಎಂದು ಹಿಂದುಮುಂದಾಗಿ ತಿರುಗಿಕೊಂಡನು. ಆಗ ಶಿವ ಅವನ ತಿಳಿಯಾದ ಭಕ್ತಿಗೆ ಮೆಚ್ಚಿ ಮೊದಲಿನಂತೆಯೆ ತಾನು ಉಂಡಂತೆ ತೋರಿಸಿಕೊಂಡು ಮಾಂಸವನ್ನು ಭೂತಗಣಕ್ಕೆ ಕೊಟ್ಟನು.

ಸ್ವಲ್ಪಹೊತ್ತು ತಡೆದು ಕಣ್ಣಪ್ಪ ತಿರುಗಿ ನೋಡಿದನು. ಶಿವ ಆರೋಗಿ ಸಿರಲು ಕಂಡು ಹರ್ಷಗೊಂಡನು. ತಾನು ನೋಡಿದ್ದರಿಂದ ದೃಷ್ಟಿ ತಾಕೀ ತೆಂದು ಹೆದರಿ ಅಕ್ಕರೆಯಿಂದ 'ಥೂ, ಥೂ' ಎಂದು ಉಗುಳಿ ರಕ್ಷೆಯಿಟ್ಟನು. ಆಮೇಲೆ ಲಿಂಗಪ್ರಸಾದವನ್ನು ತೆಗೆದುಕೊಂಡು ಸವಿದನು. ಅಂದು ಆ ಮಾಂಸ ಎಂದಿಗಿಂತಲೂ ಹೆಚ್ಚು ರುಚಿಯಾಗಿ ಕಂಡಿತು. ಮನಸ್ಸು ಹರ್ಷ ದಿಂದ ಉಬ್ಬಿತು. "ನನ್ನವನು ಉಂಡ. ನಾನು ಬದುಕಿದೆ. ಇನ್ನು ನನಗೆ ಅಸಾಧ್ಯವಾದ್ದೊಂದೂ ಇಲ್ಲ" ಎಂದು ಭುಜ ಅಪ್ಪಳಿಸಿಕೊಂಡನು. ಪ್ರೀತಿ ಯಿಂದ ಲಿಂಗವನ್ನೇ ನೋಡುತ್ತ ನಿಂತನು. ಆಗ ಉಕ್ಕುಕ್ಕಿ ಬರುವ ಆನಂದ ವನ್ನು ತಾಳಲಾರದೆ ಕುಣಿಯತೊಡಗಿದನು. ಆಗಿನ ಅವನ ಒಲವಿನ, ನಲ ವಿನ ಕುಣಿತ ವಿಚಿತ್ರವಾಗಿತ್ತು: ಬಾಗಿ ಕೈ ಚಪ್ಪಾಳೆ ಹೊಡೆಯುವನು; ನ್ಮೈಯುಬ್ಬಿ ಕೂಗುವನು; ತೊನೆದಾಡುವನು; ಒಂದೇ ಕಾಲಲ್ಲಿ ಕುಣಿಯು ವನು. 'ಉಬುಬು' ಎಂದು ಬೊಬ್ಬಿಡುವನು; ಕೋ ಎಂದು ಕೂಗುವನು. ತೊಟ್ಟ ಮಣಿಗಳೆಲ್ಲ ಅಳ್ಳಾಡುತ್ತಿರಲು ನಾಲ್ಕು ದಿಕ್ಕಿಗೂ ಕೈ ಕಾಲು ಮುಖ ಗಳನ್ನು ಚಾಚುತ್ತ ಕುಣಿದು ಕೆಲೆಯುನು. ಕೈಯ ಕತ್ತಿಯನ್ನು ಎತ್ತಿ ಹಿಡಿದು ಕುಣಿದಾಡುವನು. ತಟಕ್ಕನೆ ಕುಣಿತವನ್ನು ನಿಲ್ಲಿಸಿ ಲಿಂಗದ ಬಳಿಗೆ ಓಡಿ ಬಂದು ಬಿಗಿಯಾಗಿ ಅಪ್ಪಿಕೊಳ್ಳುವನು. ನಿಟ್ಟುಸಿರು ಬಿಟ್ಟು ತನ್ನನ್ನು ತಾನೇ ಬೈದುಕೊಳ್ಳುವನು. ಶಿವನನ್ನೇ ನೆನೆಯುತ್ತಿದ್ದು ಮತ್ತೆ ಎದ್ದು ಒಲಿ ದಾಡುವನು. ಕರಡಿಯಂತೆ ಕುಪ್ಪಿ ಕುಪ್ಪಿ ಕೆಲೆಯುವನು. ಹುಲ್ಲೆಯಂತೆ ಹಾರಿ ನೆಗೆಯುವನು. ಬಾಯಿಂದಲೆ ಕೊಂಬು, ವಌರಿ, ಕಹಳೆಗಳನ್ನೂದು ವನು. ಬಾಯಿಂದಲೆ ಕರಡೆಬಾಜಿಸಿ ಕೊಳಲೂದುವನು. "ನನ್ನವನೇ ನೋಡು" ಎಂದು 'ಎತ್ತಿಕ್ಕಿ' ಆಡುವನು; 'ಸಿಳ್ಳಿಕ್ಕಿ' ಆಡುವನು. ಮುಂದು ಗಡೆ ತುರುಬು ಕಟ್ಟಿಕೊಂಡು 'ದುಮ್ಮಿಸಲೆ' ಆಡುವನು. ಇನ್ನೂ ಹಲವು ಬಗೆಯ ಚಂದ ಚಂದದ ಬೇಡರಾಟಗಳನ್ನೆಲ್ಲ ಆಡಿ ತೋರಿಸುವನು. ಕಡೆಗೆ ಬೇರೆ ಆಟ ತೋರದಿರಲು ಕಾಲಿಗೆ ಬಂದಂತೆ ಆಡುವನು. ಹಾಡಲರಿಯದೆ 'ಎನ್ನವನೇ, ಎನ್ನವನೇ' ಎಂದು ಹಾಡುವನು. ಹೀಗೆ ಬೆರಕೆಯಿಲ್ಲದ ಬಚ್ಚ ಬರಿಯ ಭಕ್ತಿಯಿಂದ ಬೆಳಗಾಗುವವರೆಗೂ ಆಡುತ್ತಲೇ ಇದ್ದನು.

ಬೆಳಗಾಗಲು ಪ್ರೀತಿಯಿಂದ ಶಂಕರನನ್ನು ಅಪ್ಪಿ ಕೊಂಡಾಡಿ, "ಒಡೆಯನೇ, ಬೇಟೆಗೆ ಹೋಗುತ್ತೇನೆ" ಎಂದನು. "ನಿನ್ನೆಯ ಹಾಗಲ್ಲ, ನನ್ನವನೇ. ತಡಮಾಡುವುದಿಲ್ಲ. ನಿನ್ನಾಣೆ, ಬೇಗನೆ ಬರುತ್ತೇನೆ" ಎಂದು ನಂಬುಗೆ ನುಡಿದನು. ಅಗಲಲಾರ. ಅಗಲದೆ ಇರಲಾರ, ಮುನ್ನಿನ ದಿನದಂತೆಯೇ ಹೇಗೋ ಕಷ್ಟದಿಂದ ಹೊರಹೊರಟನು. 'ಮೈ ಅತ್ತ, ಮನಸ್ಸಿತ್ತ' ಎಂಬಂತಾಯಿತು ಅವನ ಸ್ಥಿತಿ. ಅಡವಿ ಅಡವಿ ಅಲೆಯುತ್ತ ಬೇಟೆಯಾಡುತ್ತಿದ್ದರೂ ಅವನ ಮನಸ್ಸಿನ ತುಂಬ ಶಿವನೇ ತುಂಬಿಕೊಂಡಿದ್ದನು.

ಇತ್ತ ಆ ಶಿವಬ್ರಾಹ್ಮಣನು ಹಿಂದಿನ ದಿನದಂತೆಯೇ ಅಂದು ಕೂಡ ಮಿಂದು ಮಡಿಯುಟ್ಟು, ಅಗ್ಗವಣಿಯ ಕೊಡವನ್ನು ಹೊತ್ತು ಹೂ ಪತ್ರೆಗಳನ್ನು ತೆಗೆದುಕೊಂಡು ಪೂಜೆಗೆಂದು ಬೆಟ್ಟ ಹತ್ತಿ ಬಂದನು. ದೇವಾಲಯದ ಬಾಗಿಲಿಗೆ ಬಂದು ನೋಡಿದರೆ ಮೊದಲಿಗಿಂತಲೂ ನಾಲ್ಮಡಿ ಹೇಸಿಕೆಯಾಗಿತ್ತು. ಕಂಡು ಒಳಕ್ಕೆ ಹೋಗದೆ ಸಿಡಿಮಿಡಿಗೊಂಡು ಹೊತ್ತ ಅಗ್ಗವಣಿ ಸಹಿತವಾಗಿಯೆ ಬೆರಗಾಗಿ ನಿಂತನು. "ಎತ್ತ ಹೋದೆ, ಶಿವನೇ? ಇಲ್ಲಿ ನಿನ್ನ ಹೊಲಬಿಲ್ಲ. ಕಾಳಹಸ್ತೀಶ್ವರನೇ ಹೀಗೆ ಮಾಡಿಸುವರೇ? ಇಂಥ ಅನಾಚಾರಕ್ಕೆ ಎಡೆಗೊಡುವರೆ? ಪ್ರಾಣಿಯನ್ನು ಕೊಲ್ಲಬಿಡುವುದು ಇದು ಧರ್ಮವೆ? ಅವನಿಗೆ ಅಡವಿಯಲ್ಲಿ ಬೇರೆ ಎಲ್ಲಿಯೂ ಎಡೆಯಿರಲಿಲ್ಲವೆ? ಈ ಮರುಳುತನಕ್ಕೇನು ಮಾಡಲಿ? ಹೇಗೆ ಬಂದು ಅರ್ಚಿಸಲಿ? ಇಂದು ಮೊದಲಾಗಿ ನಾನು ಬರುವುದಿಲ್ಲ; ಇತ್ತ ಸುಳಿಯುವುದಿಲ್ಲ. ಮೊದಲು ಅವನನ್ನು ಕೊಲ್ಲುತ್ತೇನೆ; ಆಮೇಲೆ ಬಂದು ಅರ್ಚಿಸುತ್ತೇನೆ" ಎಂದು ನೊಂದು ನೊಂದು ನುಡಿಯುತ್ತಿದ್ದನು. ಹಾಗೆ ನುಡಿಯುತ್ತಲೆ ಅಗ್ಗವಣಿ ಹೂ ಪತ್ರೆಗಳನ್ನು ಒಂದು ಕಡೆ ಇಟ್ಟು, ಗುಡಿಯನ್ನು ಗುಡಿಸಿ ಸಾರಿಸಿ ಚೊಕ್ಕಟಮಾಡಿದನು. ಬಳಿಕ ಕ್ರಮವಾಗಿ ಅಭಿಷೇಕ ಅಲಂಕಾರ ಧೂಪ ದೀಪ ನೈವೇದ್ಯಾದಿಗಳಿಂದ ಅರ್ಚಿಸಿದನು. ಆದರೂ ಅವನಿಗೆ ದೇವನ ಮೇಲೆ ಕೋಪ, ಎಂದೂ ಇಲ್ಲದ ದುರಾಚಾರಕ್ಕೆ ಅವಕಾಶಕೊಟ್ಟನಲ್ಲಾ ಎಂದು. ಹಾಗೆ ಹೇಸಿಕೆ ಮಾಡುವವನನ್ನು ಕೊಲ್ಲುವ ಸಂಕಲ್ಪ ಮಾಡಿಕೊಂಡು ಬ್ರಾಹ್ಮಣ ಹೊರಟು ಹೋದನು.

ಇದನ್ನೆಲ್ಲ ಕಂಡು ಪಾರ್ವತಿ ಅಚ್ಚರಿಪಟ್ಟು ಶಿವನನ್ನು ಹೀಗೆ ಬೆಸಗೊಂಡಳು: "ದೇವಾ, ನೀವು ಮಾಡುವುದು ನನಗೆ ತಿಳಿಯುವುದಿಲ್ಲ. ಈ ಬೇಡನ ನಡವಳಿಕೆ ಲೋಕಕ್ಕೆ ವಿರುದ್ಧವಾಗಿದೆ. ಮುಕ್ಕುಳಿಸಿದ ನೀರನ್ನು ಮಜ್ಜನಕ್ಕೆರೆಯುವವರು ಯಾರಾದರೂ ಉಂಟೆ? ಮುಡಿದ ಹೂವಿನಿಂದ ಪೂಜೆ ಮಾಡಿದವರುಂಟೆ? ಬರಿಯ ಮಾಂಸ ಮಾತ್ರವೇ ಅಲ್ಲ, ಎಂಜಲೂ ಮಾಡಿದ್ದನ್ನು ಆರೋಗಣೆಗಿತ್ತವರುಂಟೆ? ಇದನ್ನೆಲ್ಲ ಸೈರಿಸಿಕೊಂಡಿದ್ದೀರಲ್ಲಾ! ಇಂಥ ಬೇಡನಿಗೆ ಒಲಿದು ಕದ ತೆರೆಯುವುದೆ? ದೇವಾ, ಇವನು ಹುಟ್ಟಿದಂದಿನಿಂದ ಎಂದಾದರೂ ವಿಭೂತಿಯಿಟ್ಟು ಬಲ್ಲನೆ? 'ಶಿವ ಶಿವಾ' ಎಂದು ಬಲ್ಲನೆ? 'ಎನ್ನವನೇ, ಎನ್ನವನೇ' ಎನ್ನುವುದು ಇದು ಮಂತ್ರವೇ? ತನ್ನ ವಿನೋದಕ್ಕೆ ಏನೇನೋ ಮಾಡಿದರೆ ಅದು ಶಿವಾರ್ಚನೆಗೆ ತಂತ್ರವೆ? ಒಂದಿಷ್ಟೂ ಕ್ರಮವನ್ನು ಕಾಣದ ಬೇಡನಿಗೆ ಕರುಣಿಸಿದ್ದೀರಿ. ಮಿಂದು ವಿಭೂತಿಯಿಟ್ಟು ರುದ್ರಾಕ್ಷಿ ಧರಿಸಿ ಹೂವಾಯ್ದು ಅಗ್ಗವಣಿಯನ್ನು ತಂದು ಮಜ್ಜನಕ್ಕೆರೆದು ಪೂಜೆಮಾಡಿ ಆರತಿಯೆತ್ತಿ ನಲಿದು ನೋಡಿ ನೈವೇದ್ಯ ಸಮರ್ಪಿಸಿ ಜಪ ತಪ ಧ್ಯಾನ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಪೂಜಿಸುವ ಬ್ರಾಹ್ಮಣನಿಗೆ ಬಾಯಿಬಿಡದೆ ಮಿಡುಕದೆ ಇದ್ದೀರಿ. ಎಂದೂ ನಮಸ್ಕಾರ ಮಾಡಿ ಕಂಡರಿಯದ, ಅದು ಹೋಗಲಿ, ಕೈಯೆತ್ತಿ ಮುಗಿಯಲೂ ಬರದ, ಯಾವ ರೀತಿಯಿಂದಲಾದರೂ ಸ್ತೋತ್ರಮಾಡಲಾರದ ದುಶ್ಚರಿತ್ರನಾದ ಕಿರಾತನಿಗೆ ಅದು ಯಾವ ರೀತಿ ಒಲಿದಿರೋ ಕಾಣೆ!" ಎಂದಳು.

ಆ ಮಾತಿಗೆ ನಸುನಗುತ್ತ ಶಿವ ಹೀಗೆ ಉತ್ತರಕೊಟ್ಟನು: "ಪಾರ್ವತೀ, ಇದನ್ನು ನಿನಗೆ ತಿಳಿಯಹೇಳುತ್ತೇನೆ, ಕೇಳು. ಹಾರುವನ ಅಗ್ಗವಣಿ ತಿಳಿ; ಮನಸ್ಸು ಕದಡು. ಎಲೆ ಗೌರಿ, ಅವನ ಅರ್ಚನೆ ಇನಿದು; ಮನಸ್ಸು ಅತಿ ವಿಷ. ಇಟ್ಟ ವಿಭೂತಿ ಅವನನ್ನು ಮುಟ್ಟದು. ತೊಟ್ಟ ರುದ್ರಾಕ್ಷಿ ಅವನನ್ನು ಸೋಕದು. ಬಾಯಲ್ಲಿ ಮಂತ್ರ, ಮನಸ್ಸಿನಲ್ಲಿ ಕ್ಷುದ ತಂತ್ರ ಅವನಿಗೆ. ನನ್ನನ್ನು ಪೂಜಿಸಿ ಬೇರೊಬ್ಬರಿಗೆ ಕೈಯೊಡ್ಡುವರೆ? ಸತ್ಯವಿಲ್ಲದ ಪೂಜೆ ಚೆನ್ನಾಗುತ್ತದೆಯೇ, ದೇವಿ? ಮನಸ್ಸಿಲ್ಲದವನು ಮುಟ್ಟಿದರೆ ನನಗೆ ಬಡಿದ ಗಾಹಾಗುತ್ತದೆ. ಮನಸ್ಸುಳ್ಳವನು ಬಡಿದರೆ ಪೂಜಿಸಿದ ಹಾಗಾಗುತ್ತದೆ. ಭಕ್ತಿಯಿದ್ದವರು ಮಾಡಿದ್ದೆಲ್ಲ ನನಗೆ ಉಪಚಾರವೇ! ಪೂಜೆಯವರು, ಓಜೆ

ಯವರು, ಓದಿನವರು ಇವರೆಲ್ಲ ಒಂದು ಕಡೆ. ನಿಷ್ಠೆಯವರು, ಒಲವಿನವರು, ಸಾಧುತ್ವವುಳ್ಳವರು, ಇವರು ಇನ್ನೊಂದು ಕಡೆ. ಗಿರಿಜೆ, ನನ್ನ ಭಕ್ತ ಬೇಡ ನೆಂದೆಯಲ್ಲವೆ ? ಹೌದು, ಅವನು ತನಗೆ ಯಾವ ಪದವಿಯೂ ಬೇಕೆಂದು ಬೇಡನು. ನನ್ನನ್ನಲ್ಲದೆ ಬೇರೊಂದನ್ನೂ ಹಾಡನು, ನೋಡನು. ಅವನ ಕೈಯಲ್ಲಿ ಹೊಲಸು; ಮನಸ್ಸಿನಲ್ಲಿ ಅಮೃತ; ಗೌರೀ. ಅವನ ಬಾಯಲ್ಲಿ ನೀರು; ಮನದಲ್ಲಿ ಅಗ್ಗವಣಿ. ಅವನ ಮುಂಡೆಯು ಮೇಲಿನ ಹೂವು ನನಗೆ ಮನಸ್ಸಿನ ಪರಿಮಳ. ಅವನ ಕಾಲಾಟ ನನಗೆ ಅತಿ ಸ್ನೇಹದ ಅರ್ಚನೆ. 'ಎನ್ನವನೇ' ಎಂಬ ಸಲುಗೆಯ ನುಡಿ ನಿಜವಾಗಿಯೂ ಮಂತ್ರವೇ ಸರಿ. ನನ್ನನ್ನೇ ಒಲಿದು ಮಾಡುವ ಅವನ ಚರ್ಯೆಯೆಲ್ಲವೂ ಶಿವತಂತ್ರವೇ ಹೌದು. ಸ್ವಲ್ಪ ಸೈರಿಸು. ಈ ಭಕ್ತ, ಆ ವಿಪ್ರ— ಇಬ್ಬರ ಯೋಗ್ಯತೆಯನ್ನೂ ನಿನಗೆ ತೋರಿಸುತ್ತೇನೆ" ಎಂದನು.

ಕಣ್ಣಪ್ಪನ ಭಕ್ತಿ ಪೂಜೆ ಪ್ರಾರಂಭವಾಗಿ ಆರು ದಿನ ಕಳೆಯಿತು. ಏಳ ನೆಯ ದಿನ ಶಿವಾರ್ಚನೆಯ ಬ್ರಾಹ್ಮಣನಿಗೆ ಮನಸ್ಸಿನಲ್ಲಿ ಕೋಪ ಮಿತಿಮೀರಿ ಉಕ್ಕಿತು. ಶಿವಾಲಯದಲ್ಲಿ ಹೊಲಸುಮಾಡುವ ಕಿರಾತನನ್ನು ಇವೊತ್ತು ಕೊಲ್ಲಲೇ ಬೇಕೆಂದು ನಿಶ್ಚಯಿಸಿ ಒಂದು ಕಠಾರಿಯನ್ನು ಸಿದ್ಧಮಾಡಿಟ್ಟು ಕೊಂಡನು. ಅವನ ಜಡಬುದ್ಧಿಗೆ ಮತ್ತೆ ಯಾವ ನಿದರ್ಶನ ಬೇಕು ? ಕಠಾರಿ ಯನ್ನು ತೆಗೆದುಕೊಂಡು, "ಆ ತೊಂಡ ಬೇಡ ಹೀಗೆ ಮಾಡುವನೇ !" ಎಂದು ಕೊಂಡು ಬೆಟ್ಟವನ್ನೇರಿ ದೇವಾಲಯದ ಬಾಗಿಲಿಗೆ ಬಂದನು. ಅಷ್ಟರಲ್ಲಿ ಶಿವನು ತನ್ನ ಅರ್ಚಕರ ಮನಸ್ಸನ್ನು ಪರೀಕ್ಷಿಸಲು ಒಂದು ಅದ್ಭುತದ ಉಪಾಯವನ್ನು ಆಲೋಚಿಸಿದನು. ಶಿವಲಿಂಗದಲ್ಲಿ ಎರಡು ಕಣ್ಣುಗಳನ್ನು ಅಳವಡಿಸಿದನು. ಅದರಲ್ಲಿ ಒಂದು ಒಡೆದಂತಿದೆ; ಅದರಲ್ಲಿ ನೆತ್ತರು ಒಸರು ತ್ತಿದೆ. ಬ್ರಾಹ್ಮಣನು ಒಳಹೊಕ್ಕು ಲಿಂಗದ ಅಂದಿನ ರೀತಿಯನ್ನು ಕಂಡು, 'ಏನಿದದ್ಭುತ !' ಎಂದು ಅಂಜಿ ನಡುಗಿದನು. 'ನಮಃ ಶಿವಾಯ' ಎಂದು ಜಪಿಸತೊಡಗಿದನು. "ಅರಸನಿಗೆ ಕೇಡಾಗುವುದೋ ? ದೇಶಕ್ಕೇ ಕೆಟ್ಟ ದಾಗುವುದೋ ? ಏನು ಮಹೋತ್ಪಾತವೋ, ಹರನೇ ಬಲ್ಲ !" ಎಂದು ಭಯ ಗೊಂಡು ನೊಂದು ನಿಂತನು. ಸ್ವಲ್ಪಹೊತ್ತು ಅಲ್ಲಿದ್ದು, ಅದನ್ನು ನೋಡ ಲಾರದೆ ಮನಗುಂದಿ ಪಟ್ಟಣಕ್ಕೆ ಹಿಂತಿರುಗಿದನು. ಆ ಸೋಜಿಗದ ಸುದ್ದಿ

ಯನ್ನು ಊರಲ್ಲೆಲ್ಲ ಹರಡಿದನು. ಕೇಳಿ ಜನವೆಲ್ಲ ತಂಡ ತಂಡವಾಗಿ ಬೆಟ್ಟ ಹತ್ತಿ ಬಂದು ಚೋದ್ಯವನ್ನು ಕಂಡು ಅಂಜಿ ಓಡಿಹೋದರು. ಊರಿಗೆ ಹಿಂದಿರುಗಿ ಮನಸ್ಸಿನಲ್ಲೆ ಅತಿಯಾಗಿ ಭಯಪಡುತ್ತಿದ್ದರು.

ಬೇಟೆ ಮುಗಿದ ಮೇಲೆ ಕಣ್ಣಪ್ಪ ತಲೆಯಲ್ಲಿ ಹೂವು, ಬಾಯಲ್ಲಿ ನೀರು, ಕೈಯಲ್ಲಿ ಮಾಂಸದೋಗರ—ಇವನ್ನು ತೆಗೆದುಕೊಂಡು ಗುಡಿಯ ಕಡೆ ಹೊರಟನು. ಬರುವಾಗ, "ಹೊತ್ತು ಹೋಯಿತು. ಎನ್ನವನು ಹಸಿದನೋ ಏನೋ ? ಬೇಗ ಬೇಗ ಬರಲಿಲ್ಲವೆಂದು ನನ್ನ ಮೇಲೆ ಕೋಪಿಸುವನೇನೋ ? ಇವತ್ತೇಕೋ ಮನಸ್ಸಿನಲ್ಲಿ ತುಂಬ ಮರುಕವಾಗುತ್ತಿದೆ. ಹೀಗೇಕಾಗುತ್ತಿದೆಯೋ ಕಾಣೆ. ಹಸಿದವನನ್ನು ಇವತ್ತು ನಾನೇಕೆ ಬಿಟ್ಟು ಬಂದೆನೋ ? ವಶವಿಲ್ಲದ ಈ ಬೇಟೆಯಲ್ಲಿ ಅದೇಕೆ ತೊಡಗಿದೆನೋ ? ಮೃಗಗಳೂ ಹಕ್ಕಿಗಳೂ ಗುಂಪು ಕೂಡಿ ನನ್ನಪ್ಪನನ್ನು ಹೆದರಿಸುತ್ತಿರಬಹುದೆ ?" ಎಂದು ಹಲವು ಬಗೆಯಾಗಿ ಚಿಂತಿಸುತ್ತಿದ್ದನು. ಹಾಗೆಯೇ ಮುಂದುವರಿದು ಬರುತ್ತಿರಲು ಎಡದ ಭುಜ, ಕಣ್ಣು, ಹುಬ್ಬುಗಳು ಹಾರಿದವು. ಮನಸ್ಸಿಗೆ ಭಯವಾಯಿತು. ಆತಂಕಪಡುತ್ತ ಆತುರಾತುರವಾಗಿ ನಡೆದನು.

ದೇವಾಲಯದೊಳಗೆ ಕಾಲಿಟ್ಟ ಕೂಡಲೆ ಶಿವಲಿಂಗದಿಂದ ರಕ್ತಸುರಿಯುವುದು ಕಾಣಿಸಿತು. ಕಂಡು ಕಂಗೆಟ್ಟು ಕಲ್ಲಿನಂತೆ ಮರದಂತೆ ಅಳ್ಳಾಡದೆ ನಿಂತುಬಿಟ್ಟನು. ಮುಂದೇನು ಮಾಡಬೇಕೆಂದು ಬುದ್ಧಿಗೆ ಹೊಳೆಯಲೊಲ್ಲದು. ತಲ್ಲಣಿಸುತ್ತ ಬಿಲ್ಲನ್ನು ಬಿಸುಟು, ಮಾಂಸವನ್ನು ಒಗೆದು, ಬಾಯಲ್ಲಿ ತುಂಬಿಕೊಂಡಿದ್ದ ಅಗ್ಗವಣಿಯನ್ನು ಉಗುಳಿ, ಹೂವನ್ನೂ ಚೆಲ್ಲಿಬಿಟ್ಟನು. ಕಣ್‌ಕಣ್‌ಬಿಡುತ್ತ, ತಲೆ ಚಚ್ಚಿಕೊಳ್ಳುತ್ತ ಹತ್ತಿರ ಹೋದನು. ಆಗ ಒಂದು ಕಣ್ಣೊಡೆದಿರುವುದೂ ಅದರಿಂದ ನೆತ್ತರೊಸರುತ್ತಿರುವುದೂ ಕಾಣಿಸಿತು. ಕಂಡೊಡನೆ ಕಣ್ಣಪ್ಪ, "ಕೆಟ್ಟೆ ನಾನು, ಕೆಟ್ಟೆ" ಎಂದು ಚೀರಿದನು. "ಅಯ್ಯೋ ! ನಾನು ನೊಂದೆ ; ಬೆಂದುಹೋದೆ. ಏನೋ ಆಗುವ ಹಾಗೆ ಈ ಪಾಪಿಯ ಮನಸ್ಸಿಗೆ ಮೊದಲೇ ಮುಂದುದೋರಿತ್ತು. ಎನ್ನೊಡೆಯಾ ನಿನ್ನ ಕಣ್ಣು ಒಡೆದರೆ ಹೇಗೆ ನೋಡುತ್ತಿರಲಿ ? ಅಯ್ಯೋ ! ನನ್ನವನ ಹತ್ತಿರವೇ ಇದ್ದುಬಿಡದೆ ಅಗಲಿ ಹೋಗಿ ಕೆಟ್ಟೆನಲ್ಲಾ ! ನನ್ನಂಥ ಕೀಳನೊಡನೆ ನಿನಗೆ ಕೆಳೆತನವೆ ? ದೊಡ್ಡ ಕಡಲು ಕಿರುಹೊಂಡವೊಂದರ ಕೆಳೆತನ ಮಾಡಿ

ಕೊಂಡಹಾಗಾಯಿತು. ಅಯ್ಯೋ, ಮಹಾದೇವಾ! ನಾನು ಆಳಾಗಿರುವಾಗ ನಿನಗೆ ಹೀಗಾಗಬೇಕೇ?" ಎಂದು ಪರಿಪರಿಯಾಗಿ ಹಲುಬಿ ಗೋಳಾಡಿದನು. ಗೋಳಾಡುತ್ತ ಆಡುತ್ತ ರಂಗಮಂಟಪದಲ್ಲೆಲ್ಲ ಹೊರಳಾಡಿದನು. ಹೊರಳಿ ಹೊರಳಿ ಹೇಗೋ ಸಂತಯಿಸಿಕೊಂಡು ಮೆಲ್ಲನೆ ಬಂದು ಲಿಂಗದ ಮುಂದೆ ಕುಳಿತನು. ಕುಳಿತು ಮರುಗುತ್ತ, "ಎನ್ನಯ್ಯಾ, ಏನಾಯಿತು? ನನಗೆ ಹೇಳು ತಂದೇ. ನನ್ನಯ್ಯಾ, ಕಣ್ಣಿನ ನೋವು ಹೆಚ್ಚಾಗಿದೆಯಲ್ಲವೆ? ಯಾವುದಾದರೂ ಮೃಗ ಬಂದು ಒರಸಿಕೊಳ್ಳುತ್ತಿರಲು ಕೋಡಿನ ಮೊನೆ ನೆಟ್ಟಿತೆ? ಹಾಗೆ ನೆಟ್ಟು, ನಿನ್ನನ್ನಗಲಿ ಹೋದ ಈ ಪಾಪಿಯನ್ನು ಇರಿದು ಸುಟ್ಟಿತೇ?" ಎಂದು ಪೇಚಾಡಿದನು. ಉಟ್ಟ ಬಟ್ಟೆಯನ್ನು ಬಾಯೊಳಗಿಟ್ಟು ಊದಿ ಅದರಿಂದ ಕಣ್ಣನ್ನು ಒತ್ತುವನು. ಕೆಂಪನೆಯ ಎಳಚಿಗುರನ್ನು ತಂದು ಒತ್ತಿ ನೋಡುವನು. ರಕ್ತದೊರತೆ ನಿಲ್ಲದಿರಲು ನೋಡಿ ಬಾಡುವನು.

ಹೀಗೆಯೇ ಚಿಂತಿಸುತ್ತಿರಲು, ಕಡೆಗೆ ಒಂದು ಉಪಾಯ ಹೊಳೆಯಿತು. "ಹಾ! ಕಂಡೆ, ಇದಕ್ಕೊಂದುಪಾಯವನ್ನು. ಈ ಕಣ್ಣಿಗೆ ನನ್ನ ಕಣ್ಣು ಕೊಟ್ಟು ನೋಡುತ್ತೇನೆ. ಅದರಿಂದಲೂ ವಾಸಿಯಾಗದಿದ್ದರೆ ತಲೆಯನ್ನೆ ಕತ್ತರಿಸಿ ಒಪ್ಪಿಸಿಬಿಡುತ್ತೇನೆ" ಎಂದುಕೊಂಡನು. ಆ ಕ್ಷಣವೇ ಬಹು ಹರಿತವಾದ ಒಂದಂಬನ್ನು ತೆಗೆದುಕೊಂಡು ಸ್ವಲ್ಪವೂ ಅಳುಕದೆ, ಅನುಮಾನಿಸದೆ, "ಕಾಳತ್ತಿಯರಸನೇ, ನೋಡು" ಎಂದು ನುಡಿಯುತ್ತ ತಟಕ್ಕನೆ ಒಂದು ಕಣ್ಣನ್ನು ಮಿಾಟಿ ತೆಗೆದನು. ತೆಗೆದು ಲಿಂಗದ ಒಡೆದ ಕಣ್ಣೊಳಕ್ಕೆ ಒತ್ತಿ ನೋಡಿದನು. ಆ ಕಣ್ಣು ಥಳಥಳನೆ ಬೆಳಗುತ್ತಿರಲು ನೋಡಿ ಕಣ್ಣಪ್ಪ ಆನಂದಮಯನಾದನು. ಹಾಗೆ ಅವನು ನಲವೇರುತ್ತಿರುವಾಗಲೆ ಲಿಂಗದ ಮತ್ತೊಂದು ಕಣ್ಣಿನಿಂದ ನೆತ್ತರೊಸರಲು ಮೊದಲಾಯಿತು. ಅದನ್ನು ಕಂಡು ಕಟ್ಟಾಳು ಕಣ್ಣಪ್ಪ, "ನಾನು ಕಲಿ. ಇನ್ನಂಜೆ, ಈನ್ನಂಜೆ. ನನಗೆ ಇನ್ನೂ ಒಂದು ಕಣ್ಣಿದೆ. ಅದನ್ನು ನಿನಗೆ ಕೊಡುತ್ತೇನೆ. ಎನ್ನವನೇ, ಎನ್ನವನೇ, ಆ ಬಳಿಕ ನೀನು ನನಗಿದ್ದೇ ಇರುವೆ" ಎಂದು ನಿಶ್ಚಿಂತನಾಗಿ ನುಡಿದನು. ಆಮೇಲೆ ಚಂದ್ರಶೇಖರನ ಒಡೆದ ಕಣ್ಣು ನೋಯದ ಹಾಗೆ ಕಾಲುಂಗುಷ್ಠದಿಂದ ಅದನ್ನೊತ್ತಿ ಕಣ್‌ಕುರುಹು ಮಾಡಿಕೊಂಡನು. ತನ್ನ ಉಳಿದ ಕಣ್ಣನ್ನೂ ಕಿತ್ತು ತಂದು, ಮುಕ್ಕಣ್ಣನು ಒಲಿದು ಕಣ್‌ತೆರೆದು ನೋಡುವ

ಹಾಗೆ, ಉಂಗುಷ್ಟದ ಕುರುಹಿನಿಂದ ಲಿಂಗದ ಮೇಲಿಟ್ಟು ಲಿಂಗಕ್ಕೆ ಕಣ್ ಕೊಳಿಸಿದನು.

ಇನ್ನು ಸುಮ್ಮನಿರಬಾರದೆಂದು ಶಿವಲಿಂಗದಿಂದ ಶಿವ ಉದ್ಭವಿಸಿ ಬಂದು ಭಕ್ತಿಕುಶಲನಾದ ಕಣ್ಣಪ್ಪನನ್ನು ಕೈಹಿಡಿದೆತ್ತಿದನು. ಆಗ ಹೂಮಳೆ ಸುರಿಯಿತು; ದೇವದುಂದುಭಿಗಳು ಮೊಳಗಿದವು. ನಂದೀಶ ವೀರಭದ್ರಾದಿ ಗಣಗಳೂ ಇಂದ್ರಾದಿ ದೇವತೆಗಳೂ ಬಂದು ನೆರೆದರು. ಆಗ ಶಿವನು "ಕಂಡೆಯಾ ಗಿರಿಜೆ, ನನ್ನ ಪ್ರೀತಿಯ ಪ್ರಾಣವಾದವನನ್ನು? ಇಂಥ ಭಕ್ತನನ್ನು ಕಂಡು ಬಲ್ಲೆಯಾ, ಗಿರಿಜೆ? ಕೇಳಿಬಲ್ಲೆಯಾ ಗಿರಿಜೆ?" ಎಂದು ಕೇಳಿದನು. ಕಣ್ಣಪ್ಪನನ್ನು ನೋಡಿ ಪುಳಕವೇರುತ್ತಿರಲು ಬಿಗಿದಪ್ಪಿಕೊಂಡನು. ಅಪ್ಪಿ, "ಭಾಪು, ಕಣ್ಣಪ್ಪಾ, ಭಾಪು. ಎಲ್ಲರಿಗೂ ಕಣ್ಣುಕೊಡುವವನು ನಾನು. ಅದು ತಪ್ಪಿ, ಇಲ್ಲಿ ನೀನೇ ನನಗೆ ಕಣ್ಣುಕೊಟ್ಟೆ. ನನ್ನ ಕಣ್ಣೂ ನೀನೆ, ಪುಣ್ಯವೂ ನೀನೆ. ನನಗೆ ಪುತ್ರನೂ ನೀನೆ, ಮಿತ್ರನೂ ನೀನೆ. ಕಣ್ಣಪ್ಪಾ, ವಿಮಾನವನ್ನೇರು" ಎಂದು ಕೊಂಡಾಡಿ ಕರೆದನು. ದೇವತೆಗಳೆಲ್ಲ ಚೋದ್ಯಪಟ್ಟರು.

ಕಣ್ಣಪ್ಪ ಕೈಮುಗಿದು, "ದೇವಾ, ಈ ಮೈಯೊಡನೆಯೆ ಬರಲೆ? ಅಪ್ಪಣೆಯಾಗಬೇಕು" ಎಂದು ಬಿನ್ನಯಿಸಿದನು. ಆ ಮಾತುಕೇಳಿ ಈಶ್ವರನು, "ಈ ದೇಹ ಇಲ್ಲಿ ಮೆರೆಯುತ್ತಿರಲಿ" ಎಂದು ನುಡಿದು ಬೇರೊಂದು ನಿರ್ಮಲ ದಿವ್ಯ ದೇಹವನ್ನು ತಂದು ಅದರಲ್ಲಿ ಕಣ್ಣಪ್ಪನನ್ನು ಹೊಗಿಸಿ, ತನಗೆ ಕಣ್ಣು ಕೊಟ್ಟವನನ್ನು ವಿಮಾನದಲ್ಲಿ ಕೂರಿಸಿಕೊಂಡು ಸರ್ವಸಂಭ್ರಮದಿಂದ ಕೈಲಾಸಕ್ಕೆ ನಡೆದನು. ಅಲ್ಲಿ ಆಸ್ಥಾನದಲ್ಲಿ ಆನಂದಪೂರ್ಣನಾಗಿ ಭದ್ರಾಸನದ ಮೇಲೆ ಕುಳಿತು, ಕಣ್ಣಪ್ಪನನ್ನು ಕರೆದು ಗಣಪದವಿಯನ್ನು ಕೊಟ್ಟನು. ಭಕ್ತರ ಸುಖವೇ ತನ್ನ ಸುಖ; ಭಕ್ತರ ಮುಖವೇ ತನ್ನ ಮುಖ; ಭಕ್ತರ ಜೀವವೇ ತನ್ನ ಜೀವ; ಭಕ್ತರ ಕಾಯವೇ ತನ್ನ ಕಾಯ ಎನ್ನಿಸುವ ಶಿವನು ಕಣ್ಣಪ್ಪನ ಭಕ್ತಿಯ ಕಥೆಯನ್ನು ತನ್ನ ಗಣಗಳಿಗೆಲ್ಲ ಹೇಳಿ ಹಿಗ್ಗುತ್ತಿದ್ದನು. ತ್ರೈಲೋಕ್ಯರಕ್ಷಾದಕ್ಷನಾದ ಹಂಪೆಯ ವಿರೂಪಾಕ್ಷನು ಹೀಗೆ ಒಪ್ಪುತ್ತಿದ್ದನು.

———:———

# ಕಿನ್ನರ ಬೊಮ್ಮಯ್ಯ

ಉತ್ತಮ, ಮಧ್ಯಮ, ಕನಿಷ್ಠವೆಂದು ಬಂದ ಜಂಗಮವನೆಂದೆನಾದರೆ ನೊಂದೆನಯ್ಯ, ಬೆಂದೆನಯ್ಯ.. .. ... ....

ಶಿವಭಕ್ತರಾದ ಕಾರಣ ಜಂಗಮವೇ ಲಿಂಗ ಕೂಡಲ ಸಂಗಮದೇವಾ.

ತನುವ ಬೇಡಿದಡೀವೆ, ಮನವ ಬೇಡಿದಡೀವೆ, ಧನವ ಬೇಡಿದಡೀವೆ,........ ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ, ಕೂಡಲ ಸಂಗಮದೇವಾ ನಿಮಗಿತ್ತು ಶುದ್ಧನಾಗಿಪ್ಪೆ ನಿಮ್ಮ ಪುರಾತನರ ಮನೆಯಲ್ಲಿ.

ಬಸವೇಶ್ವರನ ವಚನ

" ಎಲೆ ಬಸವ ಬಸವಣ್ಣ ಬಸವಯ್ಯ ಬಸವರಸ ಬಸವರಾಜ ಬಸವಿದೇವ, ಕೇಳಯ್ಯ. ನಿನ್ನ ನೇಮವಿದಾಗಿರ್ಗುಂಟು! ಗುರುಲಿಂಗದೊಳೆರಡಿಲ್ಲದಿಪ್ಪೆ. ಶರಣರಂ ಸಂಗನೆಂದೆ ಕಾಣ್ಬೆ. ಬಂದ ಭಕ್ತರನತ್ಯಾದರಿಪೆ. ಬಪ್ಪ ಭಕ್ತರಂ ಹರುಷದೊಳಿದಿರ್ಗೊಂಬೆ. ಬೇಡಿದುದ ಶರಣರ್ಗಿಲ್ಲೆನ್ನದೀವೆ. ಬೇಡಲೊಲ್ಲದವರ್ಗೆ ಮಿಗಿಲಾಗಿ ಆರಾಧಿಪೆ "

ಬಸವರಾಜ ದೇವರ ರಗಳೆ

[ಕನ್ನಡ ನಾಡಿನ ಮಹಾಪುರುಷರಲ್ಲಿ ಬಸವಣ್ಣನವರೂ ಒಬ್ಬರು. ಅವರು ಕನ್ನಡ ನಾಡಿನ ಧರ್ಮಜೀವನದಲ್ಲಿ ಬಹಳ ಪ್ರಭಾವ ಬೀರಿದರು. ಹೊಸದೊಂದು ಸಮಾಜರಚನೆಗೆ ರೂಪುಕೊಟ್ಟರು. ಅವರು ಆರಂಭಿಸಿದ ಧಾರ್ಮಿಕ ಸಾಮಾಜಿಕ ಕ್ರಾಂತಿ ಸಾಹಿತ್ಯದಲ್ಲೂ ಪ್ರತಿಬಿಂಬಿಸಿತು.

ಬಾಗೇವಾಡಿಯೆಂಬ ಅಗ್ರಹಾರದಲ್ಲಿ ಮಾದರಸ ಮಾದಾಂಬೆ ಎಂಬ ಶೈವ ಬ್ರಾಹ್ಮಣ ದಂಪತಿಗಳಿಗೆ ಬಸವಣ್ಣ ಮಗನಾಗಿ ಹುಟ್ಟಿದನು. ಬಾಲ್ಯದಲ್ಲೇ ತಂದೆತಾಯಿಗಳು ತೀರಿಹೋದರು. 'ಶಿವಭಕ್ತಿ ಮುತ್ತಂತಿದ್ದ' ಮುತ್ತಜ್ಜಿಯ ಪೋಷಣೆಯಲ್ಲಿ ಹುಡುಗ ನಾಲ್ಕೆರಡು ವರ್ಷ ಬೆಳೆದನು. ಬಾಲ್ಯ ಕಳೆದು ಯೌವನ ಅಡಿಯಿಟ್ಟಿತು ; ಹದಿನಾರು ವರ್ಷದ ಹರೆಯವಾಯಿತು. ಆಗ ಬಸವಣ್ಣನಿಗೆ ಪರಮ ವೈರಾಗ್ಯವುಂಟಾಗಿ ಶಿವಪೂಜೆಯಲ್ಲಿ ಮನಸ್ಸು ನೆಲಸಿತು. ಶಿವಭಕ್ತಿಯೂ ಕರ್ಮವೂ ಒಂದಾಗಿರಲಾರದೆಂದು ನಿಶ್ಚಯಿಸಿ,

'ಚರ್ಮಲತೆಯಂತಿದ್ದ' ಜನಿವಾರವನ್ನು ಕಿತ್ತೊಗೆದು ಆತ ಬಾಗೇವಾಡಿಯನ್ನು ಬಿಟ್ಟು ಹೊರಟನು; ಕಪ್ಪಡಿ ಸಂಗಮಕ್ಷೇತ್ರಕ್ಕೆ ಹೋಗಿ ಅಲ್ಲಿ ಸಂಗಮೇಶ್ವರನನ್ನು ಭಕ್ತಿಯಿಂದ ಪೂಜಿಸುತ್ತಿದ್ದನು.

ಕಾಲ ಕಳೆಯಿತು. ಒಂದು ದಿನ ದೇವಾಲಯದ ರಂಗಮಂಟಪದಲ್ಲಿ ಮಲಗಿದ್ದ ಬಸವಣ್ಣನ ಕನಸಿನಲ್ಲಿ ಸಂಗಮೇಶ್ವರನು ಕಾಣಿಸಿಕೊಂಡು ಬಿಜ್ಜಳರಾಯನ ರಾಜಧಾನಿಯಾದ ಮಂಗಳವಾಡಕ್ಕೆ ಹೋಗೆಂದು ಹೇಳಿದಂತಾಯಿತು. ಬಸವಣ್ಣ ಬೆಚ್ಚಿದನು; ಸಂಗನನ್ನು ಅಗಲಿ ಹೋಗಲಾರದೆ ಪರಿಪರಿಯಾಗಿ ಹಂಬಲಿಸಿದನು. ಶಿವ ಮತ್ತೆ ಕನಸಿನಲ್ಲಿ ಕಾಣಿಸಿಕೊಂಡು "ಎಲೆ ಮಗನೆ, ಎಲೆ ಕಂದ ಬಸವ, ನಿನ್ನನ್ನಗಲಿ ನಾನಿರಲಾರೆ. ನಿನ್ನೊಡನೊಡನೆ ಬಿಡದೆ ಬರುತ್ತೇನೆ ನಾಳೆ ಮಧ್ಯಾಹ್ನ ಶುದ್ಧನಾಗಿ ಬಂದು ನಂದಿಕೇಶ್ವರನ ಮುಂದೆ ನನ್ನನ್ನು ನೆನೆಯುತ್ತ ಕೂತಿರು. ಆಗ ವೃಷಭನ ಮುಖಾಂತರದಿಂದ ನಾವೆ ಬರುತ್ತೇವೆ. ಆತ ನಿನಗೆ ಸದ್ಗುರು. ಅಲ್ಲಿಂದ ಬಳಿಕ ನಮ್ಮನ್ನರ್ಚಿಸುತ್ತ ಭಕ್ತರ ಬಂಧುವಾಗಿ ಶರಣರ ಪರುಷದ ಕಣಿಯಾಗಿ ಪರಮ ಸುಖದಿಂದಿರುವುದು" ಎಂದು ಅಪ್ಪಣೆಮಾಡಿದನು.

ಬಸವಣ್ಣನು ಸಂಗಮೇಶ್ವರನ ಅಪ್ಪಣೆಯಂತೆಯೇ ಮರುದಿನ ಮಿಂದು ವಿಭೂತಿಯಿಟ್ಟು, ಬಿಳಿಯ ಬಟ್ಟೆಯನ್ನುಟ್ಟು, ಸ್ವಾಮಿಗೆ ಅಭಿಷೇಕ ಪೂಜೆಗಳನ್ನು ಮಾಡಿ ನಮಸ್ಕರಿಸಿ ನಂದೀಶ್ವರನ ಮುಂದೆ ಕುಳಿತು ಸಂಗಮೇಶ್ವರನನ್ನು ಧ್ಯಾನಿಸುತ್ತಿದ್ದನು. ಆಗ ನಂದಿಕೇಶ್ವರನ ಹೃದಯ ಕಮಲದಿಂದ ಸಂಗಮೇಶ್ವರ ಲಿಂಗ ಹೊರಹೊರಟು ಬಂತು. ವೃಷಭನ ಮುಖ ಅರಳಿತು. ಬಸವಣ್ಣ ನಂದಿಯ ಬಾಯಿಂದ ಬರುತ್ತಿರುವ ದಿವ್ಯಲಿಂಗವನ್ನು ಕಂಡು ಸಂತೋಷಿಸಿ ಕೈಚಾಚಿದನು. ನಂದಿ ಶಿವನಾಜ್ಞೆಯಂತೆ ಸಂಗಮೇಶ್ವರ ಲಿಂಗವನ್ನು ಬಸವನ ಕೈಗೆ ಬಿಜಯಮಾಡಿಸಿದನು. ಬಸವಣ್ಣನಿಗೆ 'ಪಂಚಾಕ್ಷರಿ'ಯನ್ನು ಉಪದೇಶಿಸಿದನು. ಹೀಗೆ ನಂದಿಕೇಶ್ವರನಿಂದ ಮಂತ್ರೋಪದೇಶ ಹೊಂದಿ ಬಸವಣ್ಣನು ಸಂಗಮೇಶ್ವರನನ್ನು ನಿಷ್ಠೆಯಿಂದ ಪೂಜಿಸುತ್ತ ಮತ್ತೆ ಕೆಲವು ದಿನ ಅಲ್ಲೇ ಇದ್ದನು.

ಬಳಿಕ ಸಂಗನನ್ನಗಲಲಾರದೆ ಸಂಕಟಪಡುತ್ತ ಬಹು ದುಃಖದಿಂದ ಸ್ವಾಮಿಯನ್ನು ಬೀಳ್ಕೊಂಡು ಮಂಗಳವಾಡಕ್ಕೆ ಪ್ರಯಾಣಮಾಡಿದನು. ಅಲ್ಲಿ

ಆತನ ಬುದ್ಧಿಸಾಮರ್ಥ್ಯದಿಂದ ಬಸವಣ್ಣನಿಗೆ ಅರಮನೆಯ ಕರಣಿಕ ಶಾಲೆಯಲ್ಲಿ ವರ್ಷಕ್ಕೆ ನೂರೊಂದು ಹೊನ್ನು ಸಂಬಳದ ಒಂದು ಕೆಲಸ ದೊರೆಯಿತು. ರಾಜಭಂಡಾರದ ಮುಖ್ಯಾಧಿಕಾರಿಯಾಗಿದ್ದ ಸಿದ್ಧದಂಡೇಶನು ಬಸವಣ್ಣನ ಗುಣಗಳಿಗೆ ಮೆಚ್ಚಿ ಅವನನ್ನು ತನ್ನ ಮನೆಯಲ್ಲೆ ಇಟ್ಟುಕೊಂಡು ಸ್ವಂತ ಮಗನಂತೆ ನಡಸಿಕೊಳ್ಳುತ್ತಿದ್ದನು. ಬಸವಣ್ಣನ ಯೋಗ್ಯತೆ ದಿನದಿನಕ್ಕೆ ಹೆಚ್ಚು ಹೆಚ್ಚಾಗಿ ಪ್ರಕಾಶವಾಗುತ್ತಿತ್ತು. ಕಾಲಕ್ರಮದಲ್ಲಿ ಸಿದ್ಧದಂಡೇಶನು ಮೃತನಾಗಲು ಆತನ ಆಸ್ತಿಯನ್ನೂ ಅಧಿಕಾರವನ್ನೂ ಬಿಜ್ಜಳರಾಯನು ಬಸವಣ್ಣನಿಗೇ ಕೊಡಿಸಿದನು. ಬಸವಣ್ಣ ರಾಜನ ಭಂಡಾರಿಯಾದನು.

ಹೀಗೆ ಹೆಚ್ಚಿನ ಅಧಿಕಾರ ಕೈಗೆ ಬಂದರೂ ಬಸವಣ್ಣ ತನ್ನ ಜೀವನದ ಗುರಿಯನ್ನು ಸ್ವಲ್ಪವೂ ಮರೆಯಲಿಲ್ಲ. ಅಧಿಕಾರದ ಜೊತೆಜೊತೆಯಲ್ಲೆ ಶಿವಭಕ್ತಿಯೂ ಬೆಳೆಯುತ್ತಿತ್ತು. ತನ್ನ ತನು ಮನ ಧನಗಳನ್ನೆಲ್ಲ ಶಿವಾರ್ಪಣ ಮಾಡಿದ್ದ ಬಸವಣ್ಣನು ತನಗೆ ದೊರೆತ ಉನ್ನತ ಪದವಿಯಿಂದ ವೀರಶೈವವನ್ನು ಬೆಳಗಬೇಕೆಂದೂ ಶಿವಶರಣರ ಏಳಿಗೆಯನ್ನು ಸಾಧಿಸಬೇಕೆಂದೂ ಸಂಕಲ್ಪಿಸಿದನು. ಏಕನಿಷ್ಠೆಯಿಂದ ಅದರಂತೆ ನಡೆಯತೊಡಗಿದನು.

ಬಸವಣ್ಣ ಅನುಸರಿಸಿದ ವೀರಶೈವ ಧರ್ಮ ಹಲವು ವಿಷಯಗಳಲ್ಲಿ ಸಂಪ್ರದಾಯ ಧರ್ಮಕ್ಕೆ ಹೊಂದುತ್ತಿರಲಿಲ್ಲ. ಸಮಾಜದ ಕಟ್ಟುಪಾಡುಗಳಲ್ಲೂ ಕೆಲವಕ್ಕೆ ವಿರೋಧವಾಗಿತ್ತು. ಈ ಕ್ರಾಂತಿಕಾರಕ ಧರ್ಮವನ್ನು ಬೋಧಿಸಿ ಆಚರಿಸುತ್ತಿದ್ದವರಿಗೆಲ್ಲ ಬಸವಣ್ಣ ಮುಂದಾಳಾದನು. ಆತನ ಕೀರ್ತಿ ಎಲ್ಲ ಕಡೆಗೂ ಹರಡಿತು. ದೇಶದೇಶಾಂತರಗಳಿಂದ ಶಿವಶರಣರು ಮಂಗಳವಾಡಕ್ಕೆ ಬರತೊಡಗಿದರು. ಎಲ್ಲರನ್ನೂ ಬಸವಣ್ಣ ಆದರಿಸಿ ಸತ್ಕರಿಸುತ್ತಿದ್ದನು. ತನ್ನ ಸರ್ವ ಸಂಪತ್ತನ್ನೂ ಜಂಗಮರ ಸೇವೆಗೆ ವಿನಿಯೋಗಿಸುತ್ತಿದ್ದನು. 'ಜಂಗಮ ಸೇವೆಯೇ ಶಿವನ ಸೇವೆ' ಎಂದು ಬಸವಣ್ಣನ ದೃಢ ನಂಬಿಕೆ. ಜಂಗಮರಲ್ಲಿ 'ಕೀಳು, ಮೇಲು' ಎಂಬ ಯಾವ ಭೇದವನ್ನೂ ಎಣಿಸದೆ ಎಲ್ಲರನ್ನೂ ಶಿವನೆಂದೇ ಭಾವಿಸಿ ಭಕ್ತಿಯಿಂದ ಆರಾಧಿಸುತ್ತಿದ್ದನು. ಇದರಿಂದ ಆತ ಶಿವನ 'ಭಕ್ತಿ ಭಂಡಾರಿ'ಯೂ ಆದನು.

ಆ ಭಕ್ತಿಯನ್ನೂ ನಿಷ್ಠೆಯನ್ನೂ ಒರೆಹಚ್ಚಿ ನೋಡುವ ಅನೇಕ ಘಟನೆಗಳು ನಡೆದವು. ಎಲ್ಲ ಸಂದರ್ಭಗಳಲ್ಲೂ ಬಸವಣ್ಣನ ಮಹಾಮಹಿಮೆಯೆ ಜಯಿಸಿತು. ಬರಿಯ ವೀರಶೈವರೇ ಏಕೆ, ದೊರೆ ಬಿಜ್ಜಳನು ಕೂಡ ಬಸವಣ್ಣ ಅವತಾರಪುರುಷನೆಂದು ನಂಬುವಂತಾಯಿತು. ರಾಜ್ಯದ ಮುಖ್ಯಾಧಿಕಾರಿಯಾಗಿ, ಭಕ್ತಿ ಭಂಡಾರಿಯಾಗಿ ಬಸವಣ್ಣನು ಸುಖದಿಂದಿದ್ದನು.]

ಹೀಗಿರುವಲ್ಲಿ ಒಮ್ಮೆ ಕಿನ್ನರ ಬೊಮ್ಮಯ್ಯನೆಂಬ ಪರಮ ಸಾತ್ವಿಕನಾದ ಶಿವಶರಣನೊಬ್ಬನು ಬಸವಣ್ಣನ ಭಕ್ತಿ, ನಿಷ್ಠೆ, ದಾನ ಶೀಲತೆಗಳನ್ನು ಕೇಳಿ ಆತನನ್ನು ನೋಡಬೇಕೆಂದು ಆಸೆಪಟ್ಟನು. ತನ್ನೂರಿನಿಂದ ಭಕ್ತಗಣದೊಡನೆ ಹೊರಟು ಸಂತೋಷದಿಂದ ಮಂಗಳವಾಡಕ್ಕೆ ಬಂದನು. ಇತ್ತ ಪರಮ ಭಕ್ತನಾದ ಬಸವಣ್ಣನಿಗೆ ಬಲಗಣ್ಣು ಅದುರಿತು; ಮನಸ್ಸಿನಲ್ಲಿ ಆನಂದ ಉಕ್ಕತೊಡಗಿತು. "ಇಂದು ಶಿವಭಕ್ತರು ನನ್ನ ಮನೆಗೆ ಬರುತ್ತಾರೆ" ಎಂದು ನಿರೀಕ್ಷಿಸುತ್ತ ಎದುರುಗೊಳ್ಳಲು ಹೊರಟನು. ನಂದಿಯ ಪತಾಕೆಗಳನ್ನು ಮುಂದುಗಡೆ ಹಿಡಿದಿರಲು ಭಕ್ತ ಸಮೂಹದ ನಡುವೆ ಕಿನ್ನರಯ್ಯ ಬರುತ್ತಿರುವುದು ದೂರದಿಂದಲೆ ಕಾಣಿಸಿತು. ಬಸವಣ್ಣನು ಪರಿವಾರದೊಡನೆ ಹೋಗಿ ಎದುರುಗೊಂಡು ಭಯಭಕ್ತಿಯಿಂದ ಕಿನ್ನರಯ್ಯನಿಗೆ ಅಡ್ಡಬಿದ್ದನು. ಇಬ್ಬರೂ ಒಬ್ಬರನ್ನೊಬ್ಬರು ತಬ್ಬಿಕೊಂಡು ಕುಶಲ ಪ್ರಶ್ನೆಗಳಿಂದ ಆದರಿಸಿದರು. ಉತ್ತಮ ಶಿವಭಕ್ತನ ದರ್ಶನವಾಯಿತೆಂದು ಇಬ್ಬರೂ ಸಂತೋಷಪಟ್ಟರು.

ಬಸವಣ್ಣನು ಕಿನ್ನರಯ್ಯನನ್ನು ತನ್ನರಮನೆಗೆ ಒಡಗೊಂಡು ಕರೆತಂದನು. ಉನ್ನತವಾದ ಪೀಠದಲ್ಲಿ ಕುಳ್ಳಿರಿಸಿ ಆತನ ಪಾದಗಳನ್ನು ತೊಳೆದು ತೀರ್ಥವನ್ನು ತಲೆಗೆ ತಳಿದುಕೊಂಡನು ಕಿಂಕರನಂತೆ ಕಿನ್ನರಯ್ಯನಿಗೆ ಸೇವೆ ಮಾಡಿದನು. ಲಿಂಗಾರ್ಚನೆಗೆ ಬೇಕಾದ ಸಕಲ ಸಾಮಗ್ರಿಗಳನ್ನೂ ತರಿಸಿ ಕೊಟ್ಟನು. ಆತನೊಡನೆಯೆ ತಾನೂ ಸಂಗನಿಗೆ ಪೂಜೆ ಮಾಡಿದನು; ಆತನೊಡನೆಯೆ ಶಿವಪ್ರಸಾದಗಳನ್ನು ಸ್ವೀಕರಿಸಿದನು. ಕಿನ್ನರಯ್ಯನಿಗೆ ಉಡಲೂ ತೊಡಲೂ ಉತ್ತಮ ವಸ್ತ್ರಾಭರಣಗಳನ್ನು ಕೊಟ್ಟನು. ಆತನ ಹರ್ಷವೇ ತನಗೆ ಹರ್ಷವಾಗಲು ಆದರದಿಂದ ಆತನನ್ನು ಉಪಚರಿಸುತ್ತಿದ್ದನು. ಕೆಲವು ದಿನಗಳಲ್ಲೆ ಒಬ್ಬರಲ್ಲೊಬ್ಬರಿಗೆ ಒಲವು ಹೆಚ್ಚಿ ಸ್ನೇಹ ಬಲಿಯಿತು.

ಹೀಗಿರಲು ಒಂದು ದಿನ ಕಿನ್ನರಯ್ಯನು ಶಿವನ ಆರೋಗಣೆಗೆ ಉಳ್ಳಿ ಬೇಕೆಂದು ಬಯಸಿದನು. ತನಗೆ ಯಾವುದು ಸೊಗಸೋ ಅದೇ ಶಿವನಿಗೂ ಸೊಗಸೆಂದು ಅವನ ಭಾವನೆ. ಚೆನ್ನಾದ ಉಳ್ಳಿಗಳನ್ನು ತರಿಸಿ ಶರಣರೊಡನೆ ಮಾತಾಡುತ್ತ ಅಡಿಗೆಗಾಗಿ ಅವನ್ನು ಶೋಧಿಸುತ್ತಿದ್ದನು. ಉಳ್ಳಿಯ ಕಂಪು ಬಸವಣ್ಣನ ಮೂಗಿಗೆ ತೀಡಿತು. ಕಿನ್ನರಯ್ಯ ಬಯಸಿ ತರಿಸಿರುವನೆಂಬ ಸಂಗತಿಯನ್ನರಿಯದೆ ಬಸವಣ್ಣ, "ಈ ಅಭೋಜ್ಯ ವಸ್ತುವನ್ನು ತಂದವರು ಯಾರು?" ಎಂದು ಆಕ್ಷೇಪಿಸಿ ಉಳ್ಳಿಯನ್ನು ನಿಂದಿಸಿ ಅರಮನೆಗೆ ಹೋದನು. ಬಸವಣ್ಣನಾಡಿದ ಮಾತು ಕಿನ್ನರಯ್ಯನಿಗೆ ಕೇಳಿಸಿತು. "ಏನೆಂದು ಬಿಟ್ಟೆ, ಬಸವಣ್ಣ!" ಎಂದು ಮೊದಲು ಕೋಪ ಬಂತು. ಮರುಕ್ಷಣವೆ ಕೋಪ ನೋವಾಗಿ ಪರಿಣಮಿಸಿತು. ನೊಂದು ಕಣ್ಣೀರಿಡುತ್ತ, "ಹರಹರಾ! ನಾನಿಲ್ಲಿ ಬರಬಾರದಾಗಿತ್ತು. ಬಂದಮೇಲೆ ಸೈರಿಸಬೇಕು! ಶರಣರ ಮಹಿಮೆಯನ್ನು ದೂರದಲ್ಲಿ ಕೇಳಿ ಆದರಿಸುವುದು ಒಳ್ಳೆಯದು. ಮಲ್ಲಯ್ಯನು ಆರೋಗಿಸುವ ಈ ಅಮೃತಮಯ ಶಾಕವನ್ನು ನಿಂದಿಸಿದರಲ್ಲಾ! ಆ ನಿಂದೆಯನ್ನು ಕೇಳಿದಮೇಲೆ ಇಲ್ಲಿ ನಿಲ್ಲಲಾಗದು" ಎಂದು ನಿರ್ಧರಮಾಡಿಕೊಂಡನು. ಮುನಿದು ಕೂಡಲೇ ಹೊರಹೊರಟು ನಡೆದನು. ಮಂಗಳವಾಡದಿಂದ ಒಂದು ಗಾವುದ ದೂರದಲ್ಲಿದ್ದ ಒಂದೂರನ್ನು ಸೇರಿ ಅಲ್ಲಿ ದೇವಾರ್ಚನೆಯ ನಿತ್ಯ ನೇಮಕ್ಕೆ ಅಣಿಮಾಡಿಕೊಳ್ಳುತ್ತಿದ್ದನು.

ಇತ್ತ ಬಸವಣ್ಣನು ಅರಮನೆಯಿಂದ ಬಂದು, ಮಿಂದು ಮಡಿಯುಟ್ಟು ಎಂದಿನಂತೆ ಶರಣರ ಆರಾಧನೆಗೆ ಸಿದ್ಧಮಾಡಿಕೊಂಡನು. ಕಿನ್ನರಯ್ಯನನ್ನು ನೋಡಹೋದರೆ ಆತನಿರಲಿಲ್ಲ. ಎಲ್ಲಿ ಹುಡುಕಿದರೂ ಕಾಣಲಿಲ್ಲ. ಬಸವಣ್ಣನಿಗೆ ಭಯವಾಯಿತು. "ಎನ್ನೊಡೆಯನೆಲ್ಲಿ?" ಎಂದು ಸುತ್ತಲಿದ್ದ ಶರಣರನ್ನು ಕೇಳಿಕೊಂಡನು. ಅವರು, "ಎಲೆ ಬಸವ, ಕಿನ್ನರಯ್ಯಗಳು ತಮ್ಮ ದೇವ ಮಲ್ಲಿನಾಥನಿಗೆ ಸೊಗಸಾದ ಉಳ್ಳಿಯನ್ನು ತರಿಸಿದರೆ, ಅದನ್ನು ನಿಂದಿಸಿದರೆಂದು ಕೋಪಗೊಂಡರು. ಕೆಂಡವನ್ನು ಮೆಟ್ಟಿದ ಹಾಗೆ ಸಂತಾಪಪಟ್ಟು ಮುನಿಸಿಕೊಂಡು ಹೊರಟುಹೋದರು. ಆತ ಗುಣವಂತ, ಅಭಿಮಾನಿ, ಮುಕ್ಕಣ್ಣನ ಅವತಾರ. ಅಂಥ ಶರಣ ಮುನಿದು ಹೋಗಿಬಿಟ್ಟ, ದೇವಾ!" ಎಂದರು.

ಕೇಳಿ ಬಸವಣ್ಣ ಅಂಜಿ ಸ್ತಬ್ಧನಾಗಿ ನಿಂತನು; ಮನಸ್ಸಿಗೆ ಎಣೆಯಿಲ್ಲದ ಪರಿತಾಪವುಂಟಾಯಿತು. ಕಂದಿ ಕುಂದಿ, "ಬಂದ ಸುಕೃತ ತಿರುಗಿ ಹೋಯಿತು!" ಎಂದು ಹಂಬಲಿಸಿ ಹಲುಬಿದನು. "ಕಿನ್ನರಯ್ಯ ಮುನಿದನು. ಇನ್ನೇನು ಮಾಡೋಣ? ಇದರಿಂದ ಇನ್ನೇನೇನಾಗುವುದೋ?" ಎಂದು ಭಯಪಟ್ಟು ಗಣಸಮೂಹಕ್ಕೆ ಮೈಯಿಕ್ಕಿದನು. ಅಂದು ಬಸವಣ್ಣನ ಉಬ್ಬುಡುಗಿಹೋಯಿತು. "ಗೊತ್ತಾಯ್ತು, ಗೊತ್ತಾಯ್ತು! ಈ ಕೆಟ್ಟ ಸಾಲಗೆಯದೇ ಅಪರಾಧ. ಉಳ್ಳಿಯನ್ನು ನಿಂದಿಸಿದ ಅಪರಾಧಕ್ಕೆ ಒಂದು ದಂಡವನ್ನು ವಿಧಿಸಿರಿ" ಎಂದು ಶಿವಶರಣರನ್ನು ಕೇಳಿಕೊಂಡನು. ಆಗ ಅವರು, "ಈಗ ಸಿದ್ಧ ಮಾಡಿರುವ ಅನ್ನವೆಲ್ಲ ಹಾಗೆಯೆ ಇರಲಿ. ಕಿನ್ನರಯ್ಯನನ್ನು ಕರೆದುಕೊಂಡು ಬಂದು ಆತನಿಗೆ ಉಳ್ಳಿಯಿಂದ ಬಂದಿರುವ ಮುನಿಸನ್ನು ಉಳ್ಳಿಯಿಂದಲೆ ತೀರಿಸೋಣ" ಎಂದರು.

ಬಸವಣ್ಣ ನಲವೇರಿದನು. ಶರಣರ ಅಪ್ಪಣೆಯಂತೆ ಒಳ್ಳೆಯ ಉಳ್ಳಿಯನ್ನು ತರಹೇಳಿದನು. ಶಿವಭಕ್ತರೆಲ್ಲ ಒಟ್ಟುಗೂಡಿ ನಲಿನಲಿದು ಉಳ್ಳಿಯನ್ನು ತರುತ್ತಿದ್ದರು. ಬಸವಣ್ಣನ ಅಪ್ಪಣೆಯಾಯಿತೋ ಇಲ್ಲವೋ ಉಳ್ಳಿ ನಾಲ್ಕು ದಿಕ್ಕುಗಳಿಂದಲೂ ಬಂಡಿಬಂಡಿಯಲ್ಲಿ ತುಂಬಿ ಬರತೊಡಗಿತು. ಆಗ ಭಕ್ತರ ಉತ್ಸಾಹವೇ ಉತ್ಸಾಹ! ಉಳ್ಳಿಯ ಮುಂದೆ ಕಹಳೆ, ಮದ್ದಳೆ, ಶಂಖ ಮೊದಲಾದ ಬಗೆಬಗೆಯ ವಾದ್ಯಗಳನ್ನು ಮೊಳಗುವರು! ಹಾಡುವರು, ಹರಸುವರು, ಕುಣಿಯುವರು! ನಲಿನಲಿದು ನೋಡುವರು; ನೋಡುತ್ತ ಆಡುವರು. ಉಳ್ಳಿಯ ಮುಂದೆ ವೃಷಭಧ್ವಜಗಳನ್ನು ಹಿಡಿದೆತ್ತುವರು! ಹೀಗೆ ಸಂಭ್ರಮದಿಂದ ತಂದ ಉಳ್ಳಿಯನ್ನು ಬಸವಣ್ಣ ಎದುರುಗೊಂಡು ತೆಗೆದುಕೊಂಡನು. ಕಿನ್ನರಯ್ಯನನ್ನು ಕರೆತರಲು ತಕ್ಕ ಸಿದ್ಧತೆಗಳನ್ನು ಮಾಡತೊಡಗಿದನು.

ಆನೆಯ ರತ್ನಗಂಬಳಿ, ಕುದುರೆಯ ಹಲ್ಲಣ ಮೊದಲಾದವುಗಳನ್ನೆಲ್ಲ ಉಳ್ಳಿಯಿಂದಲೆ ಅಣಿಮಾಡಿದರು. ಉಡುವ ಧೋತ್ರ, ಹೊದೆಯುವ ವಲ್ಲಿ, ತೊಡುವ ಕವಚ, ಸುತ್ತುವ ಪಾಗು, ಹಿಡಿಯುವ ಕೋಲು, ಆಯುಧ— ಎಲ್ಲಕ್ಕೂ ಉಳ್ಳಿಯ ಅಲಂಕಾರವಾಯಿತು. ಎಲ್ಲೆಲ್ಲಿಯೂ ಉಳ್ಳಿಯ ಚಪ್ಪರ ತೋರಣಗಳಿದ್ದವು. ಊರೆಲ್ಲ ಉಳ್ಳಿಯ ಮಯವಾಯಿತು. ಸಾವಿರಾರು ಭಕ್ತರು ನೆರೆದರು. ನೂರಾರು ವೃಷಭ ಧ್ವಜಗಳೆತ್ತಿ ಹಿಡಿದುವು.

ಆ ಭಕ್ತಸಮೂಹದ ನಡುವೆ ಉಳ್ಳಿಗಳ ಗೊಂಚಲಿನಿಂದ ಕಟ್ಟಿದ ಶಿರೋಮಾಲಿಗಳನ್ನು ಧರಿಸಿ, ಉಳ್ಳಿಗಳಿಂದ ಮಾಡಿದ ಬಾಹುಬಳೆಗಳನ್ನು ತೊಟ್ಟು, ಉಳ್ಳಿಯ ಕಂಠಮಾಲೆಯನ್ನು ಹಾಕಿಕೊಂಡು, ಉಳ್ಳಿಯನ್ನು ಮುಡಿದು, ಉಳ್ಳಿಯನ್ನು ಕೈಯ್ಯಲ್ಲಿ ಹಿಡಿದು ಒಳ್ಳೆಯ ಮನಸ್ಸುಳ್ಳ ಬಸವಣ್ಣನು ನಡೆದು ಬರುತ್ತಿದ್ದನು. ಬೆಳ್ಗೊಡೆಗಳು ಗಗನವನ್ನು ಮುಸುಕಿದವು. ಬಗೆಬಗೆಯ ಆಯುಧಗಳು ಭೋರ್ಗರೆದು ಮೊಳಗಿದವು. ಜಂಗಮರು ಸಂಭ್ರಮದಿಂದ ಕೋಲಾಹಲಮಾಡುತ್ತ ಓರಣವಾಗಿ ಬರುತ್ತಿದ್ದರು. ಪುರಜನರೂ ಪ್ರೀತಿಯಿಂದ ಜೊತೆಗೆ ನಡೆದರು. ಬಸವಣ್ಣನ ಎಡಬಲಗಳಲ್ಲಿ ವೀರಮಾಹೇಶ್ವರರು "ಭಕ್ತ ಜನ ಚರಣ ಸರಸಿರುಹ ಷಟ್ಪದಾ! ಭಕ್ತ ಜನ ಕುಮುದವನ ಕಮನೀಯ ಶಶೀ! ಜಂಗಮದ ಕಿಂಕರ! ಜಂಗಮದ ಪ್ರಾಣ!" ಎಂದು ಮುಂತಾಗಿ ಬಿರುದೆತ್ತಿ ಹೊಗಳುತ್ತಿದ್ದರು. ಹೀಗೆ ಉಳ್ಳಿಯ ಮೆರವಣಿಗೆ ಕೈಲಾಸದ ಹಾದಿಯ ಹಾಗೆ, ಚಂದ್ರಶೇಖರನ ನಿಬ್ಬಣದ ಹಾಗೆ ಮುಂಬರಿದು ಬರುತ್ತಿತ್ತು.

ಕಿನ್ನರಯ್ಯನಿಗೆ ದೂರದಿಂದಲೆ ಈ ಮೆರವಣಿಗೆಯ ಕೋಲಾಹಲ ಕೇಳಿಸಿತು; ಅದರ ಸಂಭ್ರಮ ಕಾಣಿಸಿತು. ಇದೇನಿರಬಹುದೆಂದು ಸ್ವಲ್ಪಹೊತ್ತು ಯೋಚಿಸಿದನು. ತನ್ನ ಮುನಿಸನ್ನು ತಿಳಿಸುವುದಕ್ಕಾಗಿ ಬಸವಣ್ಣ ಬರುತ್ತಿರುವ ರೀತಿಯಿದೆಂದು ಮನಸ್ಸಿಗೆ ಹೊಳೆಯಿತು. ಆ ಭಾವ ಹೊಳೆಯಿತೋ ಇಲ್ಲವೋ ಮನಸ್ಸಿನಲ್ಲಿ ಮನೆ ಮಾಡಿದ್ದ ಮುನಿಸು ಮಾಯವಾಗಿ ಒಲವು ನೆಲೆ ನೆಲಸಿತು. ಆ ಭಕ್ತನ ನೆನಹು ಬಸವನತ್ತ ತಿರುಗಿತು. ಮೈ ಪುಳಕಗೊಂಡಿತು. ಸದಾಶಿವನ ಧ್ಯಾನದಲ್ಲಿ ನಿರತನಾದ ಆ ಸಾತ್ವಿಕ ಶರಣನು ಬಸವಣ್ಣನನ್ನು ಎದುರುಗೊಳ್ಳಲು ನಡೆದನು.

ಬಸವಣ್ಣ ತನ್ನ ಕಡೆಗೆ ನಗುಮೊಗದಿಂದ ನಲಿದು ಬರುತ್ತಿದ್ದ ಕಿನ್ನರಯ್ಯನನ್ನು ಕಂಡನು. ಸಂಗಮೇಶ್ವರನೆ ತನ್ನನ್ನು ಹರಸಬರುತ್ತಿರುವಂತೆ ತೋರಿತು. ಅಕ್ಕರೆಯಿಂದ ಹತ್ತಿರ ಹೋಗಿ ತನ್ನ ಸರ್ವಾಂಗವನ್ನೂ ಕಿನ್ನರಯ್ಯನ ಪಾದಗಳ ಮೇಲೆ ಇಳಿಸಿಬಿಟ್ಟನು. ಗಳಗಳನೆ ಆನಂದಾಶ್ರುಗಳನ್ನು ಸುರಿಸಿದನು. ಹೀಗೆ ಉತ್ತಮೋತ್ತಮ ಭಕ್ತಿಯಾಚಾರವನ್ನು ಮೆರೆಯುತ್ತಿರುವ ಬಸವರಾಜನನ್ನು ಕಿನ್ನರಯ್ಯನು ಪ್ರೀತಿಯಿಂದ ಎತ್ತಿ ತಬ್ಬಿಕೊಂಡನು. ಇಬ್ಬರಲ್ಲಿ ಒಬ್ಬ

ರಿಗೂ ತೃಪ್ತಿಯಿಲ್ಲ; ತಬ್ಬಿ ಒಬ್ಬರೊಳಗೊಬ್ಬರು ಹೊಗಬಯಸುವರೋ ಎಂಬಂತೆ ಕಾಣುತ್ತಿದ್ದರು. ಆಲಿಕಲ್ಲು ಆಲಿಕಲ್ಲನ್ನು ತಾಗಿದಂತಾಯಿತು; ಹಾಲೊಳಗೆ ಹಾಲು ಬೆರಸಿದ ಹಾಗಾಯಿತು; ಬೆಳಕು ಬೆಳಕನ್ನು ತಬ್ಬಿದಂತಾಯಿತು; ಅಮೃತ ಅಮೃತವನ್ನು ಅಪ್ಪಿಕೊಂಡಂತಾಯಿತು. ಹೀಗೆ ಪರಿಶುದ್ಧ ಮೂರ್ತಿಗಳಾದ ಆ ಇಬ್ಬರೂ ಸ್ನೇಹಪರವಶರಾಗಿರಲು ಕಹಳೆ ದುಂದುಭಿಗಳು ಮೊಳಗಿದವು. ಭಕ್ತರೆಲ್ಲರೂ ಹರಸಿದರು; ಬಸವಣ್ಣನನ್ನೂ ಕಿನ್ನರಯ್ಯನನ್ನೂ ಪರಿಪರಿಯಾಗಿ ಕೊಂಡಾಡಿದರು. ಪರಮ ಸಂಭ್ರಮದಿಂದ ಕಿನ್ನರಯ್ಯನನ್ನೊಡಗೊಂಡು ಬಸವಣ್ಣ ಮಂಗಳವಾಡಕ್ಕೆ ಹಿಂದಿರುಗಿದನು. ದಾರಿಯುದ್ದಕ್ಕೂ ಮಾಡಿದ್ದ ಉಳ್ಳಿಯ ಅಲಂಕಾರವನ್ನು ನೋಡಿ ವಿಸ್ಮಯ ಪಡುತ್ತ ಕಿನ್ನರಯ್ಯನು ಬಸವಣ್ಣನ ಮಹಮನೆಗೆ ಬಂದು ಸೇರಿದನು.

ಮಲ್ಲಿಗೆಯ ಬಣ್ಣ, ಬೆಳುದಿಂಗಳ ಬೆಳಕುಗಳನ್ನು ಅಪಹರಿಸಿರುವಂತೆ ಥಳಥಳಿಸುವ ಉಳ್ಳಿಗಳಿಂದ ಮಾಡಿದ ಬಗೆಬಗೆಯ ಪಕ್ವಾನ್ನಗಳನ್ನು ಶಿವಶರಣರು ಶಿವನಿಗರ್ಪಿಸಿದರು; ಲಿಂಗಕ್ಕೆರಗಿ ಪರಮ ಪ್ರಸಾದವನ್ನು ಕೈಕೊಂಡರು. ಕಿನ್ನರಯ್ಯನನ್ನೂ ಅವನಿಗೆ ಸವಿಯಾದ ಉಳ್ಳಿಯನ್ನೂ ಸಂತೋಷದಿಂದ ಹರಸಿದರು. ಕಿನ್ನರಯ್ಯನನ್ನು ಆ ರೀತಿ ಮನ್ನಿಸಿ ಜಂಗಮ ಸೇವೆಯ ಹಿರಿಮೆಯನ್ನು ಮೆರೆದ ಬಸವಣ್ಣನನ್ನು, "ಶರಣರ ಬಂಧು, ಶರಣರೊಲುಮೆಯ ಬಸವ, ಶರಣರ ಮನೆಯ ಪರುಷ ಪುರುಷನೆ, ಬಸವ, ಬಸವಯ್ಯ, ಬಸವಣ್ಣ, ದಂಡನಾಥನೆ ಬಸವ, ಗಣವಿಸರದೊಳೆಸೆದ ಸಂಗನ ಬಸವ" ಎಂದು ಮೈಯುಬ್ಬಿ ಹೊಗಳಿದರು; ಹರಸಿದರು

ಬಸವಣ್ಣನು ಆ ಹೊಗಳಿಕೆಯ ನುಡಿಗಳಿಗೆ ನಡುನಡುಗಿದನು. "ಒಂದನ್ನೂ ಹೊಗಳದಿರಿ" ಎಂದು ಅವರ ಕಾಲಿಗೆರಗಿದನು. "ಇಲ್ಲಿಂದ ಮುಂದೆ ಪ್ರತಿ ವರ್ಷವೂ ಹೀಗೆಯೇ ಉಳ್ಳಿಯ ಹಬ್ಬವನ್ನು ಮಾಡುತ್ತೇನೆ. ಇದು ನನಗೆ ನೇಮ" ಎಂದು ನುಡಿದನು. ಕಿನ್ನರಯ್ಯನ ಮುನಿಸನ್ನು ಉಳ್ಳಿಯ ಹಬ್ಬದಿಂದ ಪರಿಹರಿಸಿ ಭಕ್ತಿಭಂಡಾರಿ ಬಸವಣ್ಣನು ಸಂಗಮ ಧ್ಯಾನದಲ್ಲಿ ಪರಮಸುಖದಿಂದಿದ್ದನು.

## ಹಿನ್ನುಡಿ

[ಹನ್ನೆರಡನೆಯ ಶತಮಾನ ಕನ್ನಡ ನಾಡಿನಲ್ಲಿ ಒಂದು ಪರಿವರ್ತನೆಯ ಕಾಲ. ಆಗ ಧರ್ಮವಿಷಯವಾದ ಚಳವಳಿ ನಡೆಯಿತು; ಸಮಾಜದ ಸ್ಥಿತಿಯಲ್ಲಿ ಹೊಸ ಮಾರ್ಪಾಟು ತಲೆದೋರಿತು; ರಾಜಕೀಯದಲ್ಲೂ ಹೆಚ್ಚು ಕಡಮೆಯಾಯಿತು. ಈ ಮಾರ್ಪಾಟು ವಿಶೇಷವಾಗಿ ವೀರಶೈವ ಮತಪ್ರಸಾರದಿಂದ ಉಂಟಾಯಿತೆನ್ನ ಬಹುದು. ಆಗಿನ ಆ ಹೊಸ ಚಳವಳಿಗೆ ಒಂದು ಸ್ಪಷ್ಟ ರೂಪ ಕೊಟ್ಟು ಮುಂದು ವರಿಸಿದವರು ಭಕ್ತಿಭಂಡಾರಿ ಬಸವಣ್ಣನವರು.

ಜಾತಿ ವೃತ್ತಿ ವಿದ್ವತ್ತುಗಳ ಕೀಳು ಮೇಲುಗಳನ್ನೆಣಿಸದೆ ಶಿವಭಕ್ತಿಯಲ್ಲಿ ಸರ್ವ ಸಮಾನತೆಯನ್ನು ಬಸವಣ್ಣನವರು ಆಚರಣೆಗೆ ತಂದರು. ಅವರ ಪಂಥ ವಿಶೇಷ ವಾಗಿ ನಾಡಿನ ಸಾಧಾರಣ ಜನರಿಗೆ ಹೆಚ್ಚು ಮೆಚ್ಚಿಕೆಯಾಯಿತು. ಇದಕ್ಕನುಸಾರ ವಾಗಿ ಅವರೂ ಅವರಿಗೆ ಪ್ರೇರಕರಾಗಿದ್ದ ಇತರ ವಚನಕಾರರೂ ನಾಡುನುಡಿಯಾದ ಕನ್ನಡದಲ್ಲಿ ಧರ್ಮಬೋಧೆ ಮಾಡಿದರು.

ಇದರ ಪರಿಣಾಮವಾಗಿ ಅಲ್ಲಿಂದ ಈಚಿನ ಸಾಹಿತ್ಯದಲ್ಲೂ ಪರಿವರ್ತನೆಯುಂಟಾ ಯಿತು. ಅದುವರೆಗೆ, ಆಸ್ಥಾನದ ಪ್ರೌಢ ಪಂಡಿತರ ಮತ್ತು ರಾಜರ ಮೆಚ್ಚುಗೆಯನ್ನೆ ಹೆಚ್ಚಾಗಿ ಲಕ್ಷ್ಯದಲ್ಲಿಟ್ಟುಕೊಂಡು ಸಂಸ್ಕೃತ ತುಂಬಿದ ಪ್ರೌಢ ಶೈಲಿಯಲ್ಲಿ ಕಾವ್ಯ ಗಳನ್ನು ರಚಿಸುತ್ತಿದ್ದರು. ಅಚ್ಚಕನ್ನಡದ ಛಂದಸ್ಸು ಕೂಡ ಹೆಚ್ಚಾಗಿ ಬಳಕೆಯಲ್ಲಿರ ಲಿಲ್ಲ. ಬಸವಣ್ಣನವರ ಅನಂತರದ ಸಾಹಿತ್ಯದಲ್ಲಿ ಈ ಸ್ಥಿತಿ ಬದಲಾಯಿಸಿತು. ಅಚ್ಚ ಕನ್ನಡ ನುಡಿಗೂ ಸಾಮಾನ್ಯರಿಗೆ ಅರ್ಥವಾಗುವ ಸುಲಭ ಶೈಲಿಗೂ ಹೆಚ್ಚು ಪ್ರಾಮುಖ್ಯ ಬಂತು. ರಗಳೆ, ಷಟ್ಪದಿ, ಸಾಂಗತ್ಯ ಮುಂತಾದ ಜನಪ್ರಿಯವಾದ ಛಂದಸ್ಸುಗಳಲ್ಲಿ ಕಾವ್ಯರಚನೆಯಾಗತೊಡಗಿತು. ಭಾಷೆಯೂ ಸರಳವಾಗುತ್ತ ಬಂತು. ಸಾಹಿತ್ಯದಲ್ಲಾದ ಈ ಬಗೆಯ ಮಾರ್ಪಾಟುಗಳಿಗೆ ಜೀವಕೊಟ್ಟವನು ಹಂಪೆಯ ಹರಿಹರೇಶ್ವರ ಕವಿ.

ಹರಿಹರ ಹೊಯ್ಸಳ ರಾಜರ ಆಸ್ಥಾನದಲ್ಲಿ ಕರಣಿಕರ ಮುಖ್ಯನಾಗಿದ್ದನಂತೆ. ಆತನ ಭಕ್ತಿಪರವಶತೆಯನ್ನು ಕಂಡು ದೊರೆ ಆತನಿಗೆ ಅಧಿಕಾರದ ಹೊರೆಯನ್ನು ತಪ್ಪಿಸಿ ಆತನನ್ನು ಪಂಪಾಕ್ಷೇತ್ರಕ್ಕೆ ಕಳಿಸಿಕೊಟ್ಟನಂತೆ. ಅಲ್ಲಿ ವಿರೂಪಾಕ್ಷನನ್ನು ಭಕ್ತಿಯಿಂದ ಪೂಜಿಸುತ್ತ ಹರಿಹರ ಅನೇಕ ಕಾವ್ಯಗಳನ್ನು ರಚಿಸಿದನಂತೆ. —ಹೀಗೆಂದು ಅವನ ವಿಷಯದಲ್ಲಿ ಒಂದು ಪ್ರತೀತಿಯಿದೆ.

ಅವನು ರಾಜಾಸ್ಥಾನದಲ್ಲಿದ್ದು, ಆ ಸೇವಾವೃತ್ತಿಯಿಂದ ಬಿಡುಗಡೆ ಹೊಂದಿ ಹಂಪೆಯಲ್ಲಿ ನೆಲಸಿದನೆಂಬುದಕ್ಕೆ ಅವನ ಗ್ರಂಥಗಳಲ್ಲೂ ಸೂಚನೆ ಕಂಡುಬರುತ್ತದೆ. ಯಾವ ರಾಜನ ಆಸ್ಥಾನದಲ್ಲಿ, ಯಾವ ಅಧಿಕಾರದಲ್ಲಿ, ಇದ್ದನೆಂಬಿವೇ ಮೊದಲಾದ ಯಾವ ಸಂಗತಿಯೂ ಗೊತ್ತಾಗುವುದಿಲ್ಲ.

ಹರಿಹರ ಉತ್ತಮವರ್ಗದ ಕವಿ. 'ಗಿರಿಜಾ ಕಲ್ಯಾಣ' ಎಂಬ ಚಂಪೂ ಗ್ರಂಥ, 'ಪಂಪಾಶತಕ' ಎಂಬ ಒಂದು ಸ್ತೋತ್ರರೂಪವಾದ ಶತಕ, ಅನೇಕ (ನೂರಕ್ಕಿಂತ ಹೆಚ್ಚು) ರಗಳೆಗಳು – ಇವು ಆತನು ರಚಿಸಿರುವ ಕೃತಿಗಳು. 'ರಗಳೆ' ಎಂಬುದು ಒಂದು ಬಗೆಯ ಅಚ್ಚಕನ್ನಡ ಛಂದಸ್ಸು. ಹಿಂದಿನ ಕವಿಗಳು ಅಲ್ಲಲ್ಲಿ ಕೆಲವು ಸಾಲುಗಳನ್ನು ಮಾತ್ರ ರಗಳೆಯಲ್ಲಿ ಬರೆಯುತ್ತಿದ್ದರು. ಹರಿಹರ ಪೂರ್ಣಕಾವ್ಯಗಳನ್ನೆ ಆ ಛಂದಸ್ಸಿನಲ್ಲಿ ಬರೆದನು. ಇದರಿಂದ ಆತನಿಗೆ 'ರಗಳೆಯ ಕವಿ' ಎಂದೂ ಒಂದು ಹೆಸರು ಬಂತು.

ಗದ್ಯವನ್ನು ಹರಿಹರ ಮತ್ತೆ ಬಳಕೆಗೆ ತಂದನೆನ್ನಬಹುದು. ಕಥಾ ಕಾವ್ಯಕ್ಕೆ ತಕ್ಕಂತೆ ಮಾತಿನ ಶೈಲಿಯ ಗದ್ಯವನ್ನೆ ಆತ ತನ್ನ ಗ್ರಂಥಗಳಲ್ಲಿ ಬಳಸಿದ್ದಾನೆ. ಹಳಗನ್ನಡ ನುಡಿ ಅವನಿಂದಿತ್ತ ಹೊಸಗನ್ನಡದ ಕಡೆಗೆ ತಿರುಗುತ್ತ ಬಂತೆಂದು ಹೇಳಬಹುದು.

ಹರಿಹರ ಉತ್ತಮ ಶಿವಭಕ್ತ. ಆತನ ಗ್ರಂಥಗಳಲ್ಲಿ ಭಕ್ತಿಯ ಸೆಳವು ಎದ್ದು ಕಾಣುತ್ತದೆ. ತಮಿಳು ದೇಶದಲ್ಲಿ ಅರುವತ್ತುಮೂರು ಮಂದಿ ಶಿವಭಕ್ತರು ಹಿಂದಿನ ಕಾಲದಲ್ಲಿ ಪ್ರಸಿದ್ಧರಾಗಿದ್ದರು. ಅವರನ್ನು 'ಅರುವತ್ತು ಮೂವರು ಪುರಾತನರು' ಎಂದು ಕರೆಯುವುದು ರೂಢಿ. ಅವರ ಚರಿತ್ರೆ ತಮಿಳಿನ 'ಪೆರಿಯ ಪುರಾಣಂ' ಎಂಬ ಗ್ರಂಥದಲ್ಲಿ ದೊರೆಯುತ್ತದೆ. ಆ ಗ್ರಂಥದ ಆಧಾರದಿಂದಲೋ, ಅವರ ವಿಷಯವಾಗಿ ದೇಶದಲ್ಲಿ ಪ್ರಚಾರವಾಗಿದ್ದ ಸಂಗತಿಗಳನ್ನು ಸಂಗ್ರಹಿಸಿಯೋ, ಅಥವಾ ಎರಡನ್ನೂ ಉಪಯೋಗಿಸಿಕೊಂಡೋ ಹರಿಹರ ಆ ಪುರಾತನರ ಕಥೆಗಳನ್ನೆಲ್ಲ ಕನ್ನಡದಲ್ಲಿ ಬರೆದಿದ್ದಾನೆ. ಇವೇ 'ಪುರಾತನರ ರಗಳೆಗಳು.' ತಮಿಳುನಾಡಿನ ಆ ಪುರಾತನ ಭಕ್ತರನ್ನಲ್ಲದೆ ಕನ್ನಡನಾಡಿನಲ್ಲಿ ಬಾಳಿದ ಅನೇಕ ನವೀನ ಭಕ್ತರ ಚರಿತ್ರೆಗಳನ್ನೂ ರಗಳೆಗಳಲ್ಲಿ ರಚಿಸಿದ್ದಾನೆ. ಇವೆಲ್ಲ ಉತ್ತಮ ಕಾವ್ಯಗಳಾಗಿವೆ.

ಇಲ್ಲಿ ಕೊಟ್ಟಿರುವ ಕಣ್ಣಪ್ಪನ ಕಥೆ ಅರುವತ್ತು ಮೂವರು ಪುರಾತನರ ರಗಳೆಗಳಲ್ಲೊಂದರಿಂದ ಸಂಗ್ರಹಿಸಿದ್ದು. ಕಿನ್ನರ ಬೊಮ್ಮಯ್ಯನ ಕಥೆ ಕನ್ನಡನಾಡಿನ ಧರ್ಮವೀರರಲ್ಲೊಬ್ಬರಾದ ಬಸವಣ್ಣನವರ ಚರಿತ್ರೆಯಾದ 'ಬಸವರಾಜ ದೇವರ ರಗಳೆ'ಯ ಒಂದು ಅಧ್ಯಾಯ. 'ಬಸವರಾಜ ದೇವರ ರಗಳೆ' ಹರಿಹರನ ಕೃತಿಗಳಲ್ಲಿ ಸರ್ವೋತ್ಕೃಷ್ಟ ರತ್ನ ಎನ್ನಬಹುದು.

ಹರಿಹರ ಕವಿ ಮುಂದಿನ ಕವಿಗಳೆಲ್ಲರಿಗೂ ಎಷ್ಟೋ ಬಗೆಯಲ್ಲಿ ಮಾರ್ಗದರ್ಶಕನಾದನು. ಪ್ರಸಿದ್ಧ ಕವಿ 'ರಾಘವಾಂಕ' ಈತನ ಶಿಷ್ಯ ಮತ್ತು ಸೋದರಳಿಯ.

ಈತನು ಕ್ರಿ. ಶ. ೧೨ನೆಯ ಶತಮಾನದ ಕಡೆಯಲ್ಲೊ ೧೩ನೆಯ ಶತಮಾನದ ಮೊದಲಿನಲ್ಲೊ ಬದುಕಿದ್ದನೆಂದು ವಿಮರ್ಶಕರು ಊಹಿಸುತ್ತಾರೆ. ]

——:——

# ಉತ್ತರ ಕುಮಾರ

ಅರಸುಗಳಿಗಿದು ವೀರ, ದ್ವಿಜರಿಗೆ
ಪರಮ ವೇದದ ಸಾರ, ಯೋಗೀ
ಶ್ವರರ ತತ್ತ್ವ ವಿಚಾರ, ಮಂತ್ರಿಜನಕ್ಕೆ ಬುದ್ಧಿಗುಣ
ವಿರಹಿಗಳ ಶೃಂಗಾರ, ವಿದ್ಯಾ
ಪರಿಣತರ ಸುಪ್ರೌಢಿ, ಕಾವ್ಯಕೆ
ಗುರುವೆನಲು ರಚಿಸಿದ ಕುಮಾರ ವ್ಯಾಸ ಭಾರತವ

ವೀರನಾರಾಯಣನೆ ಕವಿ, ಲಿಪಿ
ಕಾರ ಕುವರವ್ಯಾಸ, ಕೇಳುವ
ಸೂರಿಗಳು ಸನಕಾದಿಗಳು ಜಂಗಮು ಜನಾರ್ದನರು ||

[ಪಾಂಡವರು ಅರಣ್ಯವಾಸವನ್ನು ಮುಗಿಸಿ ಅಜ್ಞಾತವಾಸಕ್ಕೆ ಮತ್ಸ್ಯದೇಶಕ್ಕೆ ಹೋದರು. ವೇಷ ಮರಸಿಕೊಂಡು ವಿರಾಟರಾಜನ ಆಶ್ರಯದಲ್ಲಿ ಒಬ್ಬೊಬ್ಬರು ಒಂದೊಂದು ಊಳಿಗದಲ್ಲಿ ನಿಂತರು. ಧರ್ಮರಾಯ ಕಂಕಭಟ್ಟನೆಂಬ ಬ್ರಾಹ್ಮಣ ನಾಗಿ ದೊರೆಯ ಸಖನಾದನು. ಭೀಮ ವಲಲನೆಂಬ ಹೆಸರಿನಿಂದ ಅರಮನೆಯ ಬಾಣಸದ ಮುಖ್ಯನಾದನು. ಅರ್ಜುನ ನಪುಂಸಕವೇಷತೊಟ್ಟು ಬೃಹನ್ನಳೆಯೆಂಬ ಹೆಸರಿಟ್ಟುಕೊಂಡು ರಾಜಪುತ್ರಿ ಉತ್ತರೆಗೆ ನಾಟ್ಯಾಚಾರ್ಯನಾದನು. ನಕುಲ ಸಹ ದೇವರು ಗವಾಧ್ಯಕ್ಷ ತುರಗಾಧ್ಯಕ್ಷರಾದರು. ಪಾಂಡವರರಸಿ ದ್ರೌಪದಿ ಸೈರಂಧ್ರಿಯಾಗಿ ರಾಣಿ ಸುದೇಷ್ಣೆಗೆ ಮುಡಿಕಟ್ಟುವ ಊಳಿಗದವಳಾದಳು.

ಹೀಗೆ ವೇಷಾಂತರದಿಂದ ಹೆರರರಿಯದಂತೆ ಇರುತ್ತಿರಲು ಸುಖವಾಗಿ ಕಾಲ ಕಳೆಯುತ್ತಿತ್ತು. ವರ್ಷ ಇನ್ನೇನು ಮುಗಿಯುತ್ತದೆ ಎನ್ನುವಷ್ಟರಲ್ಲಿ ವಿರಾಟರಾಜನ ಹೆಂಡತಿಯ ತಮ್ಮನೂ ಸೇನಾಪತಿಯೂ ಆದ ಕೀಚಕನು ದ್ರೌಪದಿಯನ್ನು ಕೆಣಕಿ ದನು. ಭೀಮ ಗಂಧರ್ವ ವೇಷದಿಂದ ಕೀಚಕನನ್ನೂ ಅವನ ಪರಿವಾರದವರಾದ ಉಪಕೀಚಕರನ್ನೂ ಧ್ವಂಸಮಾಡಿದನು.

ಯಾರೋ ಗಂಧರ್ವರಿಂದ ಕೀಚಕರೆಲ್ಲ ನಾಶವಾದರೆಂಬ ಸುದ್ದಿಯನ್ನು ಕೇಳಿ ಕೌರವರಿಗೆ ಆಶ್ಚರ್ಯವಾಯಿತು. ಕೀಚಕನನ್ನು ಕೊಂದವನು ಭೀಮನೇ ಆಗಿರ ಬೇಕೆಂದು ಊಹಿಸಿದರು. ಪಾಂಡವರನ್ನು ಕಂಡುಹಿಡಿದು ಅವರನ್ನು ಮತ್ತೆ ವನ ವಾಸಕ್ಕೆ ಕಳಿಸಬೇಕೆಂದು ವಿರಾಟನ ಮೇಲೆ ದಂಡೆತ್ತಿ ನಡೆದರು.

ತ್ರಿಗರ್ತದೇಶದರಸು ಸುಶರ್ಮನೆಂಬವನು ದಕ್ಷಿಣದಿಕ್ಕಿನಿಂದ ದಾಳಿಮಾಡಿ ವಿರಾಟನ ಗೋವುಗಳನ್ನು ಹಿಡಿದನು. ವಿರಾಟೇಶ್ವರನು ತನ್ನ ಸೈನ್ಯವನ್ನೆಲ್ಲ ಕೂಡಿಕೊಂಡು ಹೋಗಿ ಅವನನ್ನೆದುರಿಸಿದನು. ಆ ಆಕಸ್ಮಿಕದ ದಾಳಿ ತಮ್ಮನ್ನೇ ಉದ್ದೇಶಿಸಿದ್ದೆಂದು ಪಾಂಡವರಿಗೆ ಹೊಳೆಯಿತು. ಗೋವುಗಳನ್ನು ಬಿಡಿಸಿ ತರುವುದಕ್ಕಾಗಿ ತಾವೂ ರಣರಂಗಕ್ಕೆ ನಡೆದರು. ಅರ್ಜುನನೊಬ್ಬ ಹಿಂದುಳಿಯಬೇಕಾಯಿತು. ಅಂದಿನ ಕಾಳಗದಲ್ಲಿ ವಿರಾಟರಾಜನು ಸೆರೆಸಿಕ್ಕಲು, ವಲಲನು ಆತನನ್ನು ಬಿಡಿಸಿ ತಂದನು. ವೇಷಾಂತರದಿಂದ ಯುದ್ಧಮಾಡಿದ ಪಾಂಡವ ವೀರರ ಸಾಹಸದಿಂದ ಶತ್ರುಗಳು ಮುರಿದೋಡಿದರು. ತುರು ಮರಳಿತು.]

## ಪರಿತೋಷ ಸಂರಂಭದಲಿ ಮಾತಿನ ವೀರ ಬರುತಿರ್ದ

ದಕ್ಷಿಣ ಗೋಗ್ರಹಣದಲ್ಲಿ ಕೌರವಸೇನೆ ಸೋತು ಮಾನಭಂಗ ಹೊಂದಿ ಹಿಂದೆ ಸರಿಯಿತು. ಆ ಸೇನೆಗೆ ನಾಯಕನಾದ ಸುಶರ್ಮನು ದುಮ್ಮಾನದಿಂದ ಮುಸುಕಿಟ್ಟುಕೊಂಡು ಪಾಳೆಯಕ್ಕೆ ಹಿಂದಿರುಗಿದನು. ವಿಜಯವಾರ್ತೆ ವಿರಾಟಪಟ್ಟಣವನ್ನು ಹರ್ಷದಲ್ಲಿ ಮುಳುಗಿಸಿತು.

ಆ ರಾತ್ರಿ ಕಳೆದು ಬೆಳಗಾಯಿತು. ಇತ್ತ ಉತ್ತರದಲ್ಲಿ ಭೀಷ್ಮ, ದ್ರೋಣ, ಕರ್ಣ ಮೊದಲಾದ ಮಹಾವೀರರನ್ನೊಳಗೊಂಡ ಮಹಾ ಸೈನ್ಯದೊಡನೆ ದುರ್ಯೋಧನ ಸಾಗಿ ಬಂದನು. ಕೌರವನ ದಂಡು ವಿರಾಟನ ತುರುವಿಂಡನ್ನು ಮುತ್ತಿತು. ಕಾವಲಿನ ಗೋವಳರು ಸಾವಿಗಂಜದೆ ಮಲೆತು ನಿಂತರು; ಕವಿದು ಬರುವ ಕುರು ಸೇನೆಯನ್ನೆದುರಿಸಿ ತಮ್ಮಳವಿದ್ದಷ್ಟು ಹೋರಾಡಿದರು. ಕರ್ಣ, ದುಶ್ಶಾಸನ, ಜಯದ್ರಥಾದಿಗಳು ಆ ದಿಟ್ಟ ಗೊಲ್ಲರ ಪಡೆಯನ್ನು ಕೈಗಾಯದೆ ಸದೆಬಡಿದರು. ಕೌರವ ವೀರರ ಸರಳ ಸರಿಮಳೆಗೆ ಗೋಪಾಲಪಡೆ ಮುಖಕೊಡಲಾರದಾಯಿತು. ಮೇಲುವಳಕ್ಕೆದುರಾಗಿ ಕಾಳಗದಲ್ಲಿ ಮುರಿದೊರಗಿ ಅಮರ ರಾಜಧಾನಿಯ ಕೋಟೆಯನ್ನು ಲಗ್ಗೆ ಹತ್ತಿತು. ಗೋಪಾಲರು ಸಾಲುಗೆಟ್ಟೋಡಲು ಕೌರವರಾಯನ ದಳದವರು ತುರುಗಳನ್ನು ಸೆರೆಹಿಡಿದು ಕಾಳಗವನ್ನು ನಿಲ್ಲಿಸಿದರು. ಬಳಿಕ ಗೊಲ್ಲನೊಬ್ಬನಿಗೆ ಮೂಗಿನ ಮೇಲೆ ಸುಣ್ಣ ಬರೆದು "ಶೂರರನ್ನು ಬರಹೇಳು, ಹೋಗು" ಎಂದು ವಿರಾಟನ ಪಟ್ಟಣಕ್ಕೆ ಅಟ್ಟಿದರು.

ಆ ಗೊಲ್ಲ ಕೈಯ ಬಿಲ್ಲನ್ನು ಬಿಸುಟು, ಬದುಕಿ ಉಳಿದುಕೊಂಡ ತನ್ನ ತಲೆಯನ್ನು ಅಡಿಗಡಿಗೆ ಸವರಿಕೊಳ್ಳುತ್ತ ಪಟ್ಟಣಕ್ಕೆ ಓಡಿದನು. ಕಂಡು ಜನ ವೆಲ್ಲ, "ಮತ್ತೆ ಈ ರಣವಾರ್ತೆಯಿದೇನು?" ಎಂದು ಗಜಬಜಿಸಿದರು. ಬಾಯಾರಿ ಗಂಟಲೊಣಗಿದ ಆ ಗೊಲ್ಲ, "ಈ ರಣ ಕಿರಿದಲ್ಲ" ಎಂದು ನುಡಿ ಯುತ್ತ ಅರಮನೆಯತ್ತ ವೇಗದಿಂದ ನಡೆದನು.

ಅರಮನೆಯಲ್ಲಿ ದೊರೆಯಿಲ್ಲ. ದೊರೆಮಗ ಉತ್ತರ ಮೇಳದ ಗಣಿಕೆ ಯರ ಮಧ್ಯದಲ್ಲಿ ಮೆರೆಯುತ್ತಿದ್ದಾನೆ. ಗೊಲ್ಲನಿಗೆ ಮುಖದಲ್ಲಿ ಭೀತಿ ಎದು ಕಾಣುತ್ತಿದೆ; ಎದೆ ಬಡಿದುಕೊಳ್ಳುತ್ತಿದೆ; ಗಂಟಲೊಣಗಿ ನಾಲಗೆ ತೊದಲು ತ್ತಿದೆ. ಹಾಗೆಯೇ ಹುಯ್ಯಲಿಡುತ್ತ ಉತ್ತರನ ಓಲಗವನ್ನು ಹೊಕ್ಕು ಕಾಲಿ ಗೆರಗಿ ಸುದ್ದಿ ಹೇಳಿದನು. "ಏಳು ದೊರೆಯೇ, ಗಂಡನಾಗು. ಕೌರವರಾಯ ತುರುಗಳನ್ನು ಹಿಡಿದನು. ನೆಲವಗಲಕ್ಕೂ ಸೇನೆ ಬಂತು. ದಾಳಿ ಬರುತ್ತಿದೆ. ಆಳು ಕುದುರೆಗಳನ್ನು ಕರೆಸಿಕೊ. ರಾಣಿವಾಸದ ಗೂಳೆಯ ತೆಗಸು" ಎಂದು ಬಿನ್ನಯಿಸಿದನು.

ದೊರೆಮಗನಿಗೆ ವಿನೋದವೆನಿಸಿರಬೇಕು. ಕಾಲಿಗೆರಗಿದ ಗೊಲ್ಲನನ್ನು ಕುರಿತು, "ಎಲವೋ, ಏನಿದು? ತುದಿಮೂಗಿನಲ್ಲಿ ಬೆಳುವೇನು? ಥಗೆ ಹೊಯ್ದು ಅದೇಕೆ ಓಡಿ ಬಂದೆ? ನಿನ್ನಿನ ರಣವನ್ನು ಅಯ್ಯ ಗೆದ್ದನಲ್ಲಾ, ಅದೇನಾಯಿತು? ಭಯ ಬೇಡ. ಕಲಹದ ವಾರ್ತೆಯನ್ನು ತಿಳಿಸು" ಎಂದನು. ಗೊಲ್ಲನು ಹೇಳತೊಡಗಿದನು: "ಕೌರವರ ಸೇನೆ ಬಂತು. ಬಡಗ ದಿಕ್ಕಿನಲ್ಲಿ ತುರುಗಳನ್ನು ಹಿಡಿಯಿತು. ಕೌರವರಾಯ ಬಂದ. ಆತನ ನಾಯಕರು—ಅಶ್ವತ್ಥಾಮ, ದ್ರೋಣ, ಭೀಷ್ಮ, ಶಕುನಿ, ವಿಕರ್ಣ, ಕರ್ಣ, ಜಯದ್ರಥ ಮೊದಲಾದವರು—ಎಲ್ಲರೂ ಬಂದರು. ಜೀಯ, ಆ ದಳ ಎಷ್ಟು ದೊಡ್ಡದೋ ನಾನೇನು ಬಲ್ಲೆ? ಎತ್ತ ಕಣ್ಣು ಹೊರಳಿಸಿದರೂ ಅತ್ತ ಆನೆಗಳೂ ಕಾಲಾಳು ಗಳೂ ರಥಗಳೂ ಕುದುರೆಗಳೂ ರಾಯರಾವುತರೂ ಗುಂಪು ಗುಂಪಾಗಿ ಸುತ್ತ ಬಳಸಿರುವರು. ಮನಸ್ಸು ಹರಿಯುವಷ್ಟು ದೂರಕ್ಕೂ ಶತ್ರುಸೇನೆ ಯಲ್ಲದೆ ಮತ್ತೇನೂ ಕಾಣಿಸದು. ಸೂರ್ಯಕಿರಣ ಕೂಡ ನುಸುಳಿ ಬರಲಾರ ದೆನ್ನುವಷ್ಟು ದಟ್ಟವಾಗಿದೆ ಆ ಪಡೆಯ ಒಡ್ಡು. ನೀನು ಒಳಗೇ ನಿಂತು ಕಾದುವ ಹಾಗಿದ್ದರೆ ದುರ್ಗವನ್ನು ಭದ್ರಪಡಿಸು. ಕಾಳಗವನ್ನು ಹಿಂದುಗಳೆ

ಯುದ್ಧದೆ ಮುನ್ನುಗ್ಗುವ ಮನಸ್ಸುಳ್ಳವನಾದರೆ ಈಗಲೇ ಹೊರಡಬೇಕು" ಎಂದನು.

ಆ ಮಾತನ್ನು ಕೇಳಿ ಉತ್ತರ ಕುಮಾರ ಕೆಲಬಲವನ್ನು ನೋಡಿದನು; ಮೀಸೆಯನ್ನಲುಗಿಸಿದನು. ತನ್ನೆದುರಿಗೆ ನೆರೆದಿದ್ದ ಲಲನೆಯರ ಮೊಗ ನೋಡುತ್ತ ಬಿಂಕದಿಂದ ತನ್ನ ಪರಾಕ್ರಮವನ್ನು ಪ್ರದರ್ಶಿಸುತ್ತ, "ನೋಡಾಚೆ, ಈ ಕುನ್ನಿಯನ್ನು. ಯುದ್ಧ ಮಾಡದೆ ಭೀತಿಯಿಂದ ಕಳವಳಪಟ್ಟು ಹೆಂಡಿರನ್ನು ಸಾಕಲೆಂದು ಬದುಕುವ ಆಸೆಯಿಂದ ಇಲ್ಲಿಗೆ ಓಡಿಬಂದು ನನ್ನೊಡನೆ ಏನೇನೋ ಹರಟುತ್ತಾನೆ! ನಾನೇನಾದರೂ ಕೋಪೋದ್ರೇಕದಿಂದ ಯುದ್ಧಕ್ಕೆ ನಿಂತೆನಾದರೆ ಆ ಪಿನಾಕಧರನಿಗೂ ಅಸಾಧ್ಯವಾಗುವುದು" ಎಂದನು.

ಉತ್ತರನ ನುಡಿಗಳನ್ನಾಲಿಸಿ ಸತಿಯರು, "ಜೀಯ, ಕೌರವನ ಬಲ ಎಷ್ಟು ಘನವಾದರೇನು, ನಿನಗೆ ಗಹನವೆ? ಕತ್ತಲೆ ಎಷ್ಟು ದಟ್ಟವಾಗಿದ್ದರೂ ಸೂರ್ಯನೆದುರಿಗೆ ಅದಕ್ಕೆ ದಿಟ್ಟತನವೆ? ಆ ಬಿನುಗು ರಾಯರ ಬಿಂಕ ಗೋವಳರ ಮೇಲೆ ಕೈಮಾಡುವುದರಲ್ಲಿ ಸೈ. ದೊರೆಯೇ, ಆ ಕೌರವರ ಸೈನ್ಯದಲ್ಲಿ ನಿನ್ನ ಕೈಗುಣವನ್ನು ತೋರಿಸು" ಎಂದು ಉತ್ತೇಜಿಸಿದರು.

ಸತಿಯರು ಹೀಗೆ ಹೊಗಳಲು ಉತ್ತರನು ಉಬ್ಬಿದನು; ತಾನು ಶೂರನೆಂದೇ ಭಾವಿಸಿದನು. ಬೆರಳಿನಿಂದ ಮೀಸೆ ತಿರುವುತ್ತ ಮುಗುಳುನಗೆ ನಗುತ್ತ ಹರ್ಷದಲ್ಲಿ ಮೈಮರೆತನು. ರೋಮಾಂಚ ಹೊಂದಿ ಸುತ್ತಮುತ್ತಣ ಇಂದುಮುಖಿಯರನ್ನು ನೋಡಿ ನಲಿಯುತ್ತ ತನ್ನ ಪೌರುಷದ ಹೆಚ್ಚಿಗೆಯನ್ನು ಹೊಗಳಿಕೊಳ್ಳತೊಡಗಿದನು.

"ಜೂಜಿನ ಮೋಸದಲ್ಲಿ ಪಾಂಡವರನ್ನು ಸೋಲಿಸಿ ರಾಜ್ಯವನ್ನು ತೆಗೆದುಕೊಂಡ ಹಾಗೆಂದು ಭಾವಿಸಿ ನನ್ನನ್ನು ಕೆಣಕಿದನೇ ಆ ಸುಯೋಧನ? ಸಾಹಸವನ್ನು ಮೆರೆದು ಮೊದಲು ತುರುಗಳನ್ನು ಮರಳಿಸಿ ತರುತ್ತೇನೆ. ಆ ಮೇಲೆ ಕೌರವನನ್ನು ಸುಮ್ಮನೆ ಬಿಡುವೆನೆ? ಅವನ ಹಸ್ತಿನಾಪುರವನ್ನು ಸೂರೆ ಮಾಡಿ ಬಿಡುತ್ತೇನೆ. ಅವನೆಂಥ ಶೂರನೆಂಬುದನ್ನು ನಾನೇನರಿಯೆನೆ? ಜೂಜಿನಲ್ಲಿ ರಾಜ್ಯವನ್ನು ಕಸಿದುಕೊಂಡ; ಹೆಂಗಸನ್ನು ಬಡಿದ. ಪಾಂಡವರನ್ನು ಹೊರಹೊರಡಿಸಿ ಕೊಬ್ಬಿದ್ದಾನೆ. ಆ ಪರಿಯ ಭುಜಬಲವನ್ನು ನನ್ನ ಮೇಲೆ ತೋರಿಸಬಂದನಲ್ಲ! ನನ್ನನ್ನು ಬಡ ಯುಧಿಷ್ಠಿರನೆಂದು ತಿಳಿದನೋ

ಏನೊ ! ಪಾಂಡವರನ್ನು ತಗ್ಗಿಸಿದೆನೆಂಬ ಕೊಬ್ಬಿನಿಂದ ನನ್ನನ್ನು ಕೆಣಕಿದ್ದು ಯಮನ ಮೀಸೆಯನ್ನು ಹಿಡಿದೆಳೆದಂತಾಯಿತು. ಮೃತ್ಯುದೇವತೆಯ ಸೆರಗು ತೆಗೆದಂತಾಯಿತು. ಅಯ್ಯೋ, ಮರುಳಾಗಿ ಕೌರವ ಕೆಟ್ಟ ! ಇನ್ನವನು ಬದುಕಿ ನೆಲವನ್ನಾಳುವನೆ ? ಯಮನ ಮನೆಯನ್ನು ಸೇರುವನು.

ಅದು ಸರಿ. ನಾನು ಕಾಳಗಕ್ಕೆ ಹೋದರೆ ಅಲ್ಲಿ ಯಾರೊಡನೆ ಕಾದಲಿ ? ನನ್ನೊಡನೆ ಕಾಳಗನಾಡಲು ಯೋಗ್ಯರಾದವರು ಯಾರೂ ಇಲ್ಲವಲ್ಲ ! ಕೆಲವರು ಹಾರುವರು ; ಇನ್ನು ಕೆಲವರು ಹಣ್ಣು ಹಣ್ಣು ಮುದುಕರಾಗಿ ಯಮನ ನೆರೆಯೂರಿನಲ್ಲಿರುವವರು ; ಇನ್ನು ಕೆಲವರು ಅಧಮ ಕುಲದಲ್ಲಿ ಬಂದವರು. ವೀರರೆನ್ನಿಸಿಕೊಂಡವರು ಇವರೇ. ವೀರರೆನ್ನಿಸಿಕೊಂಡ ಇವರೇ ಯುದ್ಧಕ್ಕೆ ಅರ್ಹರಲ್ಲದಿರಲು ವೀರರಲ್ಲದ ಉಳಿದವರ ಮಾತೇನು ?

ದೇಶವನ್ನಾಳುವ ದೊರೆಗಳು ಬಂದು ದನಗಳನ್ನು ಹಿಡಿಯುವುದೇ ? ಈ ಕೆಲಸವಮಾಡಿ ಕೌರವ ಕೀಳನಾದ. ಆದರೆ ತಾನೆ ಏನು ? ಅದು ಅವನಿಗೆ ದಕ್ಕೀತೆ ? ಎಂದಿಗೂ ಇಲ್ಲ. ದುರ್ಯಶಸ್ಸೊಂದು ಶಾಶ್ವತವಾಗಿ ಉಳಿಯುತ್ತದೆ. ನನ್ನೊಡನೆ ಕಾದಿ ಬದುಕುವವನಾವನು ? ಆ ದುಷ್ಟನನ್ನು ಧ್ವಂಸ ಮಾಡುತ್ತೇನೆ. ಕೌರವನ ಸೇನೆಯನ್ನು ಧೂಳಿಪಟಮಾಡಿ ತೊಲಗಿಸಿಬಿಡುತ್ತೇನೆ. ಗೆಲವು ಪಡೆದು ಅಷ್ಟಕ್ಕೆ ನಿಲ್ಲದೆ ಹಸ್ತಿನಾಪಟ್ಟಣದಲ್ಲಿ ಮತ್ತೊಂದು ಠಾಣೆಯನ್ನು ಇಡುತ್ತೇನೆ. ”

—ಹೀಗೆಂದು ಉತ್ತರನು ಹೆಂಗಸರೆದುರಿನಲ್ಲಿ ಮೈ ಕೈ ತಿರುವುತ್ತ ಕತ್ತಿಯನ್ನು ಕುಟ್ಟುತ್ತ ಬಾಯಿಗೆ ಬಂದಂತೆ ಹರಟುತ್ತಿದ್ದನು. ಬೇಕು ಬೇಡೆಂದು ತಿಳಿಯ ಹೇಳುವವರು ಯಾರೂ ಇರಲಿಲ್ಲ. ಯಾವ ತಡೆಯೂ ಇಲ್ಲದಿರಲು ಅವನು ಇನ್ನೂ ಮುಂದುವರಿಸಿದನು :

“ ಭೀಷ್ಮನನ್ನು ನಾನರಿಯೆನೆ ? ನಾನು ತಿಳಿಯದವನೇ ಆ ದ್ರೋಣ ? ಕುಲದಲ್ಲಿ ಕೀಳಾದ ಕರ್ಣ ನನಗೆ ಸಮಬಲನೆ ? ಇಂಥವರನ್ನು ಕೂಡಿಕೊಂಡು ಬಂದು ಕೌರವ ಬರಿಯ ಬಯಲಾಡಂಬರದಲ್ಲಿ ತುರುಗಳನ್ನು ಹಿಡಿದನಲ್ಲಾ ! ನಾನು ಹೋಗಿ ಅವನ ಹೆಂಡಿರನ್ನು ಸೆರೆಹಿಡಿದು ತರದೆ ಬಿಡುವುದಿಲ್ಲ ’’ ಎಂದು ಜಂಬ ಕೊಚ್ಚಿದನು. ಅದನ್ನು ಕೇಳಿ ಆ ತರಳೆಯರು ಮನಸ್ಸಿನಲ್ಲೇ ಗಹಗಹಿಸಿ ನಗುತ್ತಿದ್ದರು.

ಸುಕುಮಾರ ಮತ್ತೂ ಮುಂದುವರಿಸಿದನು : “ ಮಾತಾಡಿ ಫಲವೇನು ? ನಿನ್ನಿನ ಕಾಳಗದಲ್ಲಿ ನನ್ನ ಸಾರಥಿ ಮಡಿದ ; ನಾನು ಹೆಳವನಾದೆ. ನನ್ನ ಪರಾಕ್ರಮಕ್ಕೂ ಉತ್ಸಾಹಕ್ಕೂ ತಕ್ಕವನಾದ ಸಾರಥಿಯೊಬ್ಬ ಸಿಕ್ಕಿದರೆ ಆಗ ತೋರಿಸುತ್ತೇನೆ ನನ್ನ ಕೈಗುಣವನ್ನು. ಶಿವನು ಕೃಪೆಯಿಟ್ಟು ಸಾರಥಿಯನ್ನು ಕೊಟ್ಟನಾದರೆ, ವೈರಿಗೆ ತಿಂದು ತಿಂದು ಉಬ್ಬಸ ಹತ್ತುವುದು ; ರಣಪಿಶಾಚಿ ಗಳ ಡೊಳ್ಳು ಮುಂದಕ್ಕೆ ನೂಕುವುದು ; ಯಮನ ಊರು ತುಂಬಿ ತುಳುಕು ವುದು ; ರಣ ಸಾರ್ಥಕವಾಗುವುದು ”

ಹೀಗೆ ತಡೆಯಿಲ್ಲದೆ ಗಳಹುತ್ತಿದ್ದ ರಾಜಕುಮಾರನ ಬಾಲಭಾಷಿತ ವನ್ನು ಅರ್ಜುನ ಆಲಿಸುತ್ತಿದ್ದನು. ಅವನು ಪಾಂಚಾಲೆಯನ್ನು ಒತ್ತಟ್ಟು ಕರೆದು, ನಾವು ಇನ್ನು ಸುಮ್ಮನಿರುವುದು ಸರಿಯಲ್ಲ. ಅವಧಿ ಮುಗಿಯಿತು. ಕೌರವರ ದಂಡು ಬಂದಿರುವುದು ನಮುಸ್ಸರವೇ. ನಾವು ನಮ್ಮ ರಾಜ್ಯವನ್ನು ಕೈಗೆ ತೆಗೆದುಕೊಳ್ಳಬೇಕು. ಆದ್ದರಿಂದ ನಾನು ಅರ್ಜುನನ ಸಾರಥಿಯೆಂದು ಉತ್ತರೆಗೆ ಸೂಚಿಸಿ ನನ್ನನ್ನು ಕರಸುವಂತೆ ಮಾಡು ” ಎಂದು ಅವಳಿಗೆ ಗುಟ್ಟಾಗಿ ಹೇಳಿದನು. ದ್ರೌಪದಿಗೆ ನಲವೇರಿತು. ಉತ್ತರೆಯ ಬಳಿ ಬಂದು “ ಅನ್ನಾ, ಈ ಬೃಹನ್ನಳೆ ಅರ್ಜುನನ ಸಾರಥಿ. ಖಾಂಡವ ವನವನ್ನು ಸುಟ್ಟಾಗ ಅಗ್ನಿಯನ್ನು ಕಾಯ್ದವನು ಇವನೇ ” ಎಂದು ತಿಳಿಸಿದಳು. ಕೇಳಿ ಉತ್ತರೆ ಹರ್ಷಿತೆಯಾದಳು. ಓಲಗಕ್ಕೆ ಬಂದು ಅಣ್ಣನಡಿಗೆರಗಿ ಕೈಮುಗಿದು “ ಸಾರಥಿಯ ನೆಲೆಯನ್ನು ಕೇಳಿದೆ. ಅಣ್ಣದೇವ, ಕಾಳಗಕ್ಕೆ ನಡೆ. ಭೂಪಾಲಕ ರನ್ನು ಜಯಿಸು ” ಎಂದಳು.

“ ತಂಗೀ, ಹೇಳವ್ವಾ ತಾಯಿ. ನಿನಗೆ ಈ ಸಂಗತಿಯನ್ನು ಯಾರು ಹೇಳಿದರು ? ಆತ ಸಾರಥಿತನದ ಕೆಲಸದಲ್ಲಿ ಸಮರ್ಥನೆ ? ಸಮರ್ಥನಾದರೆ ಮುಂದೆ ಮಂಗಳವುಂಟು ; ಕಾಳಗದಲ್ಲಿ ನಾನು ಅಭಂಗನಾದೆ. ನನ್ನ ಶೂರತನ ವನ್ನು ನೀನು ಉಳಿಸಿದೆ. ಹೇಳು, ಹೇಳು ” ಎಂದು ಉತ್ತರ ಬಹು ಆತುರ ದಿಂದ ಪ್ರಶ್ನೆಮಾಡಿದನು.

“ ಈ ಸೈರಂಧ್ರಿ, ನನಗೆ ಹೇಳಿದಳು. ಇಂದ್ರನ ನಂದನ (ಖಾಂಡವ) ವನವನ್ನು ಸುಡುವಾಗ ಈತನು ಪಾರ್ಥನಿಗೆ ಸಾರಥಿಯಾಗಿದ್ದನಂತೆ. ಈ

ವಿಚಾರ ನನಗೆ ಗೊತ್ತಿಲ್ಲ; ಸೈರಂಧ್ರಿ ಹೇಳಿದ್ದು. ಹಿಂಜರಿಯದೆ ನಮ್ಮ ಬೃಹನ್ನಳೆಯನ್ನು ಕರಸು" ಎಂದು ಉತ್ತರೆ ಉತ್ತರ ಕೊಟ್ಟಳು.

ಆ ಮಾತು ಕೇಳಿ ಲೇಸಾಯ್ತೆಂದು ನುಡಿದು, ಉತ್ತರನು ಸೈರಂಧ್ರಿಯ ಕಡೆ ತಿರುಗಿದನು. ಅವಳನ್ನು ಕುರಿತು, "ಸಾರಥಿಯನ್ನು ಕೊಟ್ಟು ನನ್ನನ್ನುಳಿಸಿದೆ, ನೀನು ಮಾಡಿದ್ದು ಲೇಸಾಯಿತು. ಇನ್ನು ಕೌರವನ ಕರುಳು ಬಗೆದುಬಿಡುತ್ತೇನೆ. ತಡಮಾಡದೆ ನೀನೆ ಹೋಗಿ ಪಾರ್ಥಸಾರಥಿಯನ್ನು ಕರೆದುಕೊಂಡು ಬಾ" ಎಂದು ಪರಮೋತ್ಸಾಹದಿಂದ ನುಡಿದನು.

ಆಕೆ, "ಆ ವೀರ ನನ್ನನ್ನು ಲಕ್ಷಿಸುವುದಿಲ್ಲ. ನಿಮ್ಮ ತಂಗಿಯನ್ನೆ ಕಳಿಸಿ ಕರಸಿಕೊಳ್ಳಿ" ಎಂದಳು. ಆಗ ಉತ್ತರ ಕುಮಾರನು ತಂಗಿಗೆ, "ಅಮ್ಮಾ ನೀನೆ ಹೋಗಿ ಸಾರಥಿಯನ್ನು ಕರೆದುಕೊಂಡು ಬಾ" ಎಂದು ಹೇಳಿದನು. ಉತ್ತರೆ ಒಪ್ಪಿಕೊಂಡು ತನ್ನ ಗುರುವಿನೆಡೆಗೆ ನಡೆದಳು.

ಅವಳ ಬರವನ್ನು ಕಂಡು ಅರ್ಜುನನು, "ಉತ್ತರೇ, ಕುಮಾರೀ! ಇದೇನು, ರಭಸದಿಂದ ಬಂದೆ? ಈ ರಭಸ ಯಾವುದೋ ದೊಡ್ಡ ಕಾರ್ಯವನ್ನು ಸೂಚಿಸುತ್ತದೆ. ಅದೇನು?" ಎಂದು ಕೇಳಿದನು. ರಾಜಕುಮಾರಿ "ಬೇರೆ ಏನೂ ಇಲ್ಲ. ನನ್ನ ಮಾತನ್ನು ಹುರುಳಿಲ್ಲದ್ದೆಂದು ಕಡೆಗಣಿಸದೆ ನಡಸಿಕೊಡುವುದಾದರೆ ಹೇಳುತ್ತೇನೆ" ಎಂದಳು. "ಮಗಳೇ, ನಿನ್ನ ಮಾತನ್ನು ಮೀರಬಲ್ಲೆನೇ, ನಾನು?" ಎಂದು ಅರ್ಜುನ ಅವಳಿಗೆ ನಂಬುಗೆ ಹೇಳಿದನು. ಉತ್ತರೆ ಧೈರ್ಯಗೊಂಡು ಹೀಗೆಂದಳು: "ಹಸ್ತಿನಾಪುರದ ಅರಸುಗಳು ದಂಡೆತ್ತಿ ಬಂದರು. ಕಾವಲುಗಳಲ್ಲಿ ಮೇಯುತ್ತಿದ್ದ ಲಕ್ಷಾಂತರ ಗೋವುಗಳನ್ನು ಹಿಡಿದುಕೊಂಡರು. ದನಗಾವಲಿನ ಗೊಲ್ಲಪಡೆ ಕಾದಿ ಮಡಿಯಿತು. ನಮ್ಮಣ್ಣ ಕಾಳಗಮಾಡಿ ತುರುಗಳನ್ನು ಬಿಡಿಸಿಕೊಂಡು ಬರುತ್ತಾನೆ. ಅವನಿಗೆ ಸಾರಥಿಯಿಲ್ಲ. ನೀವು ಆ ಅರ್ಜುನನ ಸಾರಥಿಯೆಂದು ಕೇಳಿದೆವು. ಇನ್ನು ಮುಂದಿನದು ನಿಮಗೇ ಗೊತ್ತು" ಎಂದು ನುಡಿದು ಮುಖ ನೋಡುತ್ತ ನಿಂತಳು. ಆ ಕುಮಾರಿಯ ಮಾತು ಕೇಳಿ ಅರ್ಜುನನು, "ನಡೆ; ನಿನ್ನ ಮಾತನ್ನು ಮೀರಬಲ್ಲೆನೆ? ಹಿಂದೆ ನಾನು ಸಾರಥಿಯಾಗಿದ್ದದ್ದು ನಿಜ. ನೋಡೋಣ" ಎಂದು ನುಡಿಯುತ್ತ ಅವಳ ಜೊತೆಯಲ್ಲೆ ಉತ್ತರನ ಓಲಗಕ್ಕೆ ಬಂದನು.

ಬೃಹನ್ನಳೆಯನ್ನು ಕಂಡು ಉತ್ತರ ಹರ್ಷಗೊಂಡನು. ಹತ್ತಿರ ಕರೆದು ಮನ್ನಣೆ ಮಾಡಿ ಕಾರ್ಯವನ್ನು ತಿಳಿಸಿದನು. "ಎಲೆ ಬೃಹನ್ನಳೇ, ನನಗೆ ಅಗ್ಗಳೆಯರೊಡನೆ ಕಾಳಗ ತೊಡಕಿಕೊಂಡಿದೆ. ನನ್ನ ಸಾರಥಿ ಸತ್ತು ಹೋದನು. ನೀನು ಸಾರಥಿಯಾಗಿ ನನ್ನನ್ನು ಳಿಸಬೇಕು. ನೀನು ಸಮರ್ಥ; ಪಾರ್ಥನ ಸಾರಥಿ. ನೀನು ಒಲಿದು ಮೆಚ್ಚುವಂತೆ ಶತ್ರುಸೇನೆಯೊಡನೆ ಕಾಳಗಮಾಡಿ ತೋರಿಸುತ್ತೇನೆ" ಎಂದನು.

ಅರಿಯದ ಹುಡುಗನಿಗೆ ವಿವೇಕವನ್ನು ಸೂಚಿಸಲೋ ಎಂಬಂತೆ ಅರ್ಜು ನನು, "ಈಗ ನನಗೆ ಭರತ ವಿದ್ಯೆಯ ಪರಿಚಯವೇನೋ ಚೆನ್ನಾಗಿದೆ. ಸಾರಥಿತನವನ್ನು ಮಾಡಿ ಎಷ್ಟೋ ಕಾಲ ಕಳೆಯಿತು. ಅದು ಮರೆತು ಹೋಗಿದೆ. ಅಲ್ಲದೆ ಈಗ ಎದುರಿಸಬೇಕಾದ ಶತ್ರುಗಳು ಸಾಮಾನ್ಯರಲ್ಲ; ಭೀಷ್ಮ ಮೊದಲಾದವರು. ಕೈ ಮನ ಬರಡರಾದವರು ಅವರೆದುರು ನಿಲ್ಲುವುದು ಕಷ್ಟ. ರಣವೆಂಬುದು ಬರಿ ಸೂರೆಯಲ್ಲ" ಎಂದು ಮರುನುಡಿದನು.

ಉತ್ತರ ಸಾರಥಿಯ ಹೆದರಿಕೆಯನ್ನು ಮುಂದುಮಾಡಿ, "ನಾನಿರು ವಾಗ ಭೀಷ್ಮಾದಿಗಳು ನಿನಗೇನು ಮಾಡಿಯಾರು? ಅಳುಕಬೇಡ, ಒಂದು ನಿಮಿಷದಲ್ಲಿ ಕಾಳಗವನ್ನು ಗೆದ್ದುಬಿಡುತ್ತೇನೆ. ನಾನು ಯಾರೆಂಬುದನ್ನು ತಿಳಿಯೆಯಲ್ಲಾ! ನೀನು ಸಾರಥಿಯಾಗು, ಸಾಕು" ಎಂದು ತನ್ನ ಪ್ರತಾಪ ವನ್ನು ಮೆರೆದನು.

"ವೀರನಹುದು, ರಾಜಕುಮಾರಾ. ಕಿರುಹರೆಯವಲ್ಲವೆ ನಿನಗೆ? ಎಂದು ಬೃಹನ್ನಳೆ ಸಾರಥಿತನಕ್ಕೆ ಒಪ್ಪಿದನು. ಒಳ್ಳೆಯದೊಂದು ರಥವನ್ನು ತರಿಸಿ, ಲಾಯಕ್ಕೆ ಹೋಗಿ ಉತ್ತಮಾಶ್ವಗಳನ್ನು ಆಯ್ದು ತಂದು ಹೂಡಿದನು; ಕಲಿಪಾರ್ಥ ರಥವನ್ನೇರಿದನು. ಉತ್ತರ ಕುಮಾರನಿಗೆ ಶೃಂಗಾರಮಾಡಿ ಅಂಗನೆಯರು ಮಂಗಳಾರತಿಯೆತ್ತಿದರು. ರಾಜಕುಮಾರನು ಸರ್ವಾಂಗ ಶೃಂಗಾರದಿಂದ ಹೊಳೆಹೊಳೆಯುತ್ತ ಬಂದು ರಥವನ್ನು ಹತ್ತಿ ಹೊಂಗೆಲಸದ ಅಂಗಿಯನ್ನು ಪಾರ್ಥನಿಗೆ ಕೊಟ್ಟನು. ತಾನು ಸೀಸಕ ಕವಚಗಳನ್ನು ಅನು ಗೊಳಿಸಿಕೊಂಡು ಹೊರಡಲು ಸಿದ್ಧನಾದನು.

ಅರ್ಜುನ ಅಂಗಿಯನ್ನು ತಲೆಕೆಳಕಾಗಿ ತೊಟ್ಟುಕೊಳ್ಳಹೋಗಲು ಕಂಡು ಪೆಂಗಸರೆಲ್ಲ ಕೈತಟ್ಟಿ ಚಪ್ಪಾಳೆ ಹೊಡೆಯುತ್ತ ಘೊಳ್ಳೆಂದು ನಕ್ಕರು.

ಪಾರ್ಥ ನಾಚಿದಂತೆ ತಲೆಬಾಗಿ ನಿಂತನು. ಆತನು ಮತ್ತೆ ಮೇಲ್ಮುಖವಾಗಿ ತೊಡುತ್ತಿರಲು ಉತ್ತರೆ ನಸುನಕ್ಕಳು. ಆಗ ಉತ್ತರನು, "ಸಾರಥಿ ಅರಿಯ. ತಪ್ಪೇನು?" ಎಂದು ನುಡಿಯುತ್ತ ತಾನೆ ಅವನಿಗೆ ಕವಚ ತೊಡಿಸಿದನು. "ಕವಚ ತೊಡುವುದಕ್ಕೆ ಬಾರದವನು ಇವನು ಹೇಗೆ ಯುದ್ಧದಲ್ಲಿ ಸಾರಥಿತನ ಮಾಡುತ್ತಾನೋ!" ಎಂದು ನಾರಿಯರೆಲ್ಲ ಚಿಂತಿಸುತ್ತಿದ್ದರು. "ನಮ್ಮಣ್ಣ ಯುದ್ಧವನ್ನು ಗೆಲ್ಲುತ್ತಾನೆ. ಶತ್ರು ವೀರರ ರತ್ನಾಭರಣ ಅಲಂಕಾರಾದಿಗಳನ್ನು ನನಗಾಗಿ ತೆಗೆದುಕೊಂಡು ಬಾ, ಸಾರಥೀ" ಎಂದು ಉತ್ತರೆ ಗುರುವನ್ನು ಕೇಳಿಕೊಂಡಳು. ಅರ್ಜುನ ನಸುನಗುತ್ತ ಒಪ್ಪಿಗೆ ಸೂಚಿಸಿದನು.

ಇಷ್ಟಾದ ಮೇಲೆ ಪಾರ್ಥ ಸಾರಥಿಯಾಗಿ ರಥ ನಡಸಿದನು. ಆ ಜವ ಗುದುರೆಗಳು ಗಾಳಿಯನ್ನೂ ಮುಂಚಿ ಮುನ್ನುಗ್ಗಿ ಹಾರಿದವು. ತೇರೋಟದ ಆ ವೇಗವನ್ನು ಕಂಡು, "ಹೊಸ ಪರಿಯ ಸಾರಥಿ. ಇವನ ಸಂಗಡ ಬರಲು ನಮಗೆ ಅಸದಳ" ಎಂದುಕೊಂಡು, ಊರಲ್ಲಿ ಉಳಿದಿದ್ದ ಪರಿವಾರದ ದಂಡು ಹೇಳದೆ ಕೇಳದೆ ಹಿಂದೆ ನಿಂತಿತು. ತೇರ ಗಾಲಿಯಿಂದೆದ್ದ ದೂಳಿನಿಂದ ದಿಕ್ಕುಗಳನ್ನೆಲ್ಲ ಕವಿಸುತ್ತ ಅರ್ಜುನ ಕೌರವರಾಯನ ಸೇನೆಗೆ ಎದುರಾಗಿ ನಡೆದನು.

ಹಾಗೆ ಅತಿ ವೇಗದಿಂದ ರಥ ಓಡುತ್ತಿರಲು ಸ್ವಲ್ಪ ಹೊತ್ತಿನಲ್ಲೆ ಉತ್ತರ ಕುಮಾರನಿಗೆ ದೂರದಲ್ಲಿ ಕೌರವ ಸೈನ್ಯ ಸಾಗರ ಗೋಚರವಾಯಿತು. ಆನೆಗಳೊಡ್ಡು ದೊಡ್ಡ ದೊಡ್ಡ ಬಂಡೆಗಳ ಹಾಗೆ ನಿಂತಿದ್ದವು; ಕುದುರೆಗಳ ಸಾಲುಗಳು ತೆರೆತೆರೆಯಾಗಿ ಕಂಗೊಳಿಸುತ್ತಿದ್ದವು; ನಡುನಡುವೆ ತೇರುಗಳ ಹೊರಳಿಗಳು ಸುಳಿಗಳನ್ನು ಹೋಲುತ್ತಿದ್ದವು; ಮೇಲೆತ್ತಿದ ಬೆಳ್ಗೊಡೆಗಳು ನೊರೆಗುಳ್ಳೆಗಳಿಗೆಣೆಯಾದವು; ಓಡಾಡುವ ಭಟಸಮೂಹ ಜಲಚರಗಳಂತಿರಲು ಬಗೆಬಗೆಯ ರಣವಾದ್ಯಗಳ ಅಬ್ಬರ ಕಡಲ ಮೊರೆತದಂತೆ ಕಿವಿಯೊಡೆಯುತ್ತಿತ್ತು. ವಿರಾಟಕುಮಾರನ ಕಣ್ಣುಗಳಿಗೆ ವೀರರು ಝಳಪಿಸುವ ಕತ್ತಿಯ ಹೊಳಪು ಕಿಡಿಯಾಗಿಯೂ ಕಡಹುಗಳು ಕೆಚ್ಚನೆ ಉರಿಯಾಗಿಯೂ ಭಟರ ಉಗ್ಗಡದ ರೌದ್ರ ರಭಸ ಛಟಛಟ ಧ್ವನಿಯಾಗಿಯೂ ಮೇಲೆದ್ದು ಕವಿಯುವ ದೂಳು ಹೊಗೆಯ ರಾಶಿಗಳಾಗಿಯೂ ಇದನ್ನೆಲ್ಲ ಒಳಕೊಂಡ ಆ ಮಹಾಸೈನ್ಯ ದೊಡ್ಡದೊಂದು ಕಾಡುಕಿಚ್ಚಾಗಿಯೂ ಕಾಣಿಸಿತು. "ಇದೇನು ಕಾಲಕೂಟದ

ತೊರೆಯೋ? ಕಾಲರುದ್ರನ ಹಣೆಗಣ್ಣ ಬೆಂಕಿಯೋ; ಕಾಣೆ." ಎಂದು ಕೊಂಡು ಸುಕುಮಾರ ಹೆದರಿದನು.

ಹೆದರಿ ಸಾರಥಿಯನ್ನು ಕುರಿತು, "ಕಣ್ಣುಗಳು ಈ ಪಡೆಗಡಲನ್ನು ಹಾಯಲಾರವು; ಮನಸ್ಸು ಹೊಕ್ಕು ಈಸಲಾರದು. ಇಂಥ ಪಡೆಯನ್ನು ಎದುರಿಸಿ ಬದುಕಲಾಗುವುದೇ? ಒಡಲೊಂದುಳಿದಿದ್ದರೆ ಮುಂದೆ ಸುಖ ವನ್ನು ಕಾಣಲಾದೀತು. ನೆಲವೇ ಪಡೆಗಳನ್ನೀದಿತೋ ಎಂಬಂತೆ ಹರಡಿದೆ ಈ ಸೇನೆ. ಇದರೊಡನೆ ಕಾದುವವನು ಮೃಡನೇ ಆಗಿರಬೇಕು. ನಾವು ಕಾದಿ ಗೆದ್ದದ್ದಾಯಿತು. ಈ ಬಲಕ್ಕೆ ಇಗೋ, ನಮಸ್ಕಾರ ಮಾಡುತ್ತೇನೆ. ಅಯ್ಯಾ ಬೃಹನ್ನಳೀ, ಹಸಿದ ಮಾರಿಯ ಮಂದೆಯೊಳಕ್ಕೆ ನುಸುಳಿ ಬಂದ ಕುರಿಯಂತಾಗಿದ್ದೇನೆ. ಕುದುರೆಗಳನ್ನೋಡಿಸಬೇಡ. ಚಮ್ಮಟಿಗೆಯನ್ನು ಬಿಸುಟುಬಿಡು. ನನ್ನಿಂದ ಕದನ ಸಾಗದು. ಕೌರವನು ಅಸಮಬಲನಯ್ಯಾ. ರಥವನ್ನು ಹಿಂದಿರುಗಿಸು" ಎಂದು ನುಡಿದನು.

ಅದನ್ನು ಕೇಳಿ ಅರ್ಜುನ, "ಎಲೆ ಕುಮಾರ, ಇದೇನು, ನೀನು ಹೇಳು ವುದು? ಮೊದಲ ಮುತ್ತಿನಲ್ಲೆ ಹಲ್ಲು ಮುರಿದಂತಾಯಿತು. ಕಾಳಗ ತೊಡಗು ವುದಕ್ಕೆ ಮೊದಲೆ ಸಮರಭೀತಿಯನ್ನು ತಳೆದೆಯಲ್ಲ! ಅಳುಕಬಾರದು. ನಿಮ್ಮ ತಂದೆಯ ಕುಲಕ್ಕೆ ಕುಂದು ತರಬೇಡ. ಮನಸ್ಸಿನಲ್ಲಿ ಗೆಲುವು ತಂದುಕೊ. ಗೆಲುಮನದಿಂದ ಕಾದು" ಎಂದು ಧೈರ್ಯ ಹೇಳುತ್ತ ರಥ ವನ್ನು ಬೇಗ ಬೇಗ ಮುಂಬರಿಸಿದನು.

ತೇರು ಮುಂದೆ ಹರಿದಂತೆಲ್ಲ, ಕುರುಬಲದ ಹತ್ತಿರ ಹತ್ತಿರಕ್ಕೆ ನಡೆ ದಂತೆಲ್ಲ ಕುಮಾರನಿಗೆ ತನು ಭಾರಯಿಸಿತು; ಕೂದಲು ನಿಮಿರಿ ನಿಂತಿತು; ಮೈ ಬಿಸಿಯಾಯಿತು; ಕೈಕಾಲು ನಡುಗಿತು; ಭಯದ ತಾಪದಿಂದ ನಾಲ ಗೆಯ ನೀರಾರಿ ತುಟಿಯೊಣಗಿಹೋಯಿತು. ಕಣ್ಣಿವೆ ಸೀದು 'ಇನ್ನು ನೋಡಲಾರೆ' ನೆಂದು ಆ ಸುಕುಮಾರ ಕೈಯಿಂದ ಮುಖ ಮುಚ್ಚಿಕೊಂಡು ಬಿಟ್ಟನು. ಮುಖ ಮುಚ್ಚಿಕೊಂಡೇ ಸಾರಥಿಗೆ ಹೀಗೆ ಹೇಳಿದನು: "ಇದೇಕೆ, ಸಾರಥೀ, ರಥವನ್ನು ಮುಂದಕ್ಕೆ ನೂಕಿ ನನ್ನ ಗಂಟಲು ಕೊಯ್ಯುತ್ತೀಯೆ? ಅಯ್ಯೋ! ನಿನಗೇನು ಕಣ್ಣಿಂಗಿಹೋಯಿತೆ? ನೋಡು ಈ ಮಹಾಬಲವನ್ನು.

ಇದು ದೇವತೆಗಳಿಗೂ ಅಸಾಧ್ಯವಾದ್ದು. ನಿನಗೆ ಎಳ್ಳಷ್ಟೂ ವಿವೇಕವಿಲ್ಲ. ವಾಘೆಯನ್ನು ಬಿಗಿಹಿಡಿ. ಕುದುರೆಗಳನ್ನು ತಿರುಗಿಸು."

ಅರ್ಜುನ ಆ ನುಡಿಗಳನ್ನು ಕಿವಿಗೇ ಹಾಕಿಕೊಳ್ಳಲಿಲ್ಲ. ರಥ ಹತ್ತೆಂಟಡಿ ಮುಂದೆ ಹರಿಯಿತು. ಉತ್ತರಕುಮಾರನ ಕೈ ಸರ ಬಿಗಿಸಡಿಲಿ ಹಿಡಿದ ಬಿಲ್ಲಂಬು ಗಳು ಬಿದ್ದುಹೋದವು. "ಅಯ್ಯೋ ಕೊಲೆಗಾರ ಸಾರಥೀ! ಹಿಡಿ ಕುದುರೆ ಗಳನ್ನು. ಹೀಗೆ ಹೇಳುತ್ತಿರುವ ನಾವು ನಿನಗೆ ಹಗೆಗಳೆ? ಒಡೆಯರಲ್ಲವೆ? ಸ್ವಾಮಿದ್ರೋಹಕ್ಕೆ ತೊಡಗಿದೆಯಲ್ಲ. ಲೇಸು, ಲೇಸು" ಎಂದು ಕೂಗಿದನು.

ಅದಕ್ಕೂ ಅರ್ಜುನ ಗಮನ ಕೊಡಲಿಲ್ಲ. ನಗುನಗುತ್ತ ರಥವನ್ನು ಮುಂದೆ ಬಿಟ್ಟನು. ನಾಲ್ಕೆಂಟಡಿ ಹೋಗುವಷ್ಟರಲ್ಲಿ ರಾಜಕುಮಾರನಿಗೆ ದಿಕ್ಕು ತೋಚದಾಯಿತು. ಮುಂಜೆರಗನ್ನು ಸರಿಮಾಡಿ ಕಟ್ಟಿಕೊಂಡು ಮೆಲ್ಲನೆ ರಥದ ಹಿಂದುಗಡೆಗೆ ಬಂದು ನಿಂತು ಕೆಳಕ್ಕೆ ಧುಮುಕಿ, 'ಬದುಕಿದೆ' ಎಂದು ಕೊಂಡು, ಮಂಡೆಯ ಕೂದಲು ಬಿಚ್ಚಿ ಹಾರಾಡುತ್ತಿದ್ದರೂ ಲಕ್ಷ್ಯವಿಲ್ಲದೆ ಸಿಟ್ಟೋಟದಲ್ಲಿ ಓಡಿಹೋದನು. ಕಲಿ ಪಾರ್ಥ ಅದನ್ನು ಕಂಡನು. "ಈ ಕೇಡಾಡಿ ಕೂದಲು ಕೆದರಿ ಕೆಟ್ಟೋಡುತ್ತಿದ್ದಾನೆ. ಇವನನ್ನು ಹಿಡಿಯಬೇಕು." ಎಂದು ನಿಶ್ಚಯಿಸಿ ಕೂಡಲೆ ರಥದಿಂದಿಳಿದು ಸೂರಿಯಿಂದ ಅವನನ್ನು ಅಟ್ಟಿ ಕೊಂಡು ಹೋದನು.

ಕೌರವಸೇನೆ ಇದನ್ನೆಲ್ಲ ಕಂಡು, "ಎಲೆಲೇ, ಕಾದ ಬಂದ ವೀರನ ಪರಾಕ್ರಮವನ್ನು ನೋಡು, ನೋಡು!" ಎಂದು ನಗೆಗಡಲಿನಲ್ಲಿ ಮುಳುಗಿ ಬಿಟ್ಟಿತು. ಅರ್ಜುನನು ಬೆಂಬತ್ತುವುದನ್ನು ಕಂಡು, "ಇದಾವನೋ ಬೆಂಬತ್ತಿ ಹೋಗುತ್ತಿದ್ದಾನೆ; ಸುಭಟನ ಹಾಗೆ ಕಾಣುತ್ತಾನೆ. ಇವನಾವನೋ ತಿಳಿ ಯುವುದಿಲ್ಲ. ಆಕಾರದಲ್ಲಿ ಅರ್ಜುನನನ್ನು ಹೋಲುತ್ತಿದ್ದಾನೆ" ಎಂದು ಗಜ ಬಜಿಸಿದರು. "ಈತ ಸಾರಥಿಗಿಂತ ಮೇಲಾದವನು. ಓಡುವವನು ಉತ್ತರ. ಅರ್ಜುನನಿಗೆ ಸಾರಥಿತನ ಎಲ್ಲಿ ಬಂತು? ನೋಡಿದರೆ ನಪುಂಸಕ ವೇಷ ಬೇರೆ ಕಾಣುತ್ತಿದೆ" ಎಂದು ಕೆಲವರು ತರ್ಕಿಸಿದರು. ಈ ತರ್ಕ ವಿತರ್ಕಗಳನ್ನು ಕೇಳಿ ಕರ್ಣ ಕಡು ಕೋಪದಿಂದ, "ಈತ ಅರ್ಜುನನಾಗಲಿ, ಇಂದ್ರನಾಗಲಿ, ರಾಮನಾಗಲಿ—ಯಾರೇ ಆಗಲಿ, ಮೇಲೆ ಬಿದ್ದು ಕೆಣಕಿದರೆ ಕತ್ತರಿಸಿ ಹಾಕು ತ್ತೇನೆ" ಎಂದು ಗರ್ಜಿಸಿದನು.

ಇತ್ತ ಅರ್ಜುನನು ಓಡುವ ಉತ್ತರನನ್ನು ಬೆಂಬತ್ತಿ, "ಹೋದೆಯಾದರೆ ನಿನ್ನ ತಲೆಯನ್ನು ಕುತ್ತಿ ಬಿಸುಡುತ್ತೇನೆ. ನಿಲ್ಲು, ನಿಲ್ಲು" ಎಂದು ಬೆದರಿಸಿದನು. ಉತ್ತರ ಹಿಂದಿರುಗಿ ನೋಡಿದನು. ಸಾರಥಿ ಬೆನ್ನಟ್ಟಿ ಬರುತ್ತಿರುವುದು ಕಾಣಿಸಿತು. ಮನಸ್ಸಿನಲ್ಲಿ, "ಇವನು ಸಾರಥಿಯಲ್ಲ, ಮೃತ್ಯು. ಈ ಪಾಪಿಯನ್ನು ಎಲ್ಲಿ ತಂದೆನೋ!" ಎಂದುಕೊಂಡು ನಿಲ್ಲದೆ ಮತ್ತೆ ಓಡತೊಡಗಿದನು. ಪಾರ್ಥನು ಸರಸರನೆ ನುಗ್ಗಿ ನೂರು ಹೆಜ್ಜೆಯಿಡುವಷ್ಟರಲ್ಲಿ ಅಟ್ಟಿ ಅವನನ್ನು ಹಿಡಿದುಬಿಟ್ಟನು. ಜಡಿದು, "ಇದೇನು ಮಾಡಿದೆ? ನೀನು ಕ್ಷತ್ರಿಯ ಕುಲದಲ್ಲಿ ಹುಟ್ಟಲಿಲ್ಲವೇ? ಬಹು ದಿಟ್ಟತನದಿಂದ ಹೆಂಗಸರೆದುರಿನಲ್ಲಿ ಹೊಟ್ಟೆ ಗುಟ್ಟಿದೆಯಲ್ಲ! ಹಗೆಗಳೆದುರಿಗೆ ಆ ದಿಟ್ಟತನವನ್ನೆಲ್ಲ ತೊರೆದುಬಿಟ್ಟೆ. ದುರಾತ್ಮಾ, ವಿರಾಟನ ವಂಶವನ್ನು ಮುರಿದೆಯಲ್ಲೋ!" ಎಂದು ಮೂದಲಿಸಿದನು.

ತನ್ನ ಉಪಾಯ ಫಲಿಸದೆ ಸಾರಥಿಯ ಕೈಗೆ ಸಿಕ್ಕಿಬೀಳಲು ಉತ್ತರ ಭಯಭ್ರಾಂತನಾದನು. ಹಲ್ಲು ಕಿರಿದು ಬಾಯೊಳಗೆ ಬೆರಳಿಟ್ಟು ಅಳುಕಿ ತಲೆಬಾಗಿಸಿದನು. "ಸಾರಥೀ, ನನ್ನನ್ನು ಬಿಟ್ಟು ಕಳಿಸು. ನಾನು ಮತ್ತೆ ನಿನ್ನ ಹೊಟ್ಟೆಯಲ್ಲಿ ಹುಟ್ಟಿ ಬಂದೆನೆಂದು ತಿಳಿದುಕೊ. ಕಾಳಗದಲ್ಲಿ ಈ ಒಡ್ಡನ್ನು ಮುರಿಯುವ ಬಲ್ಮೆ ಯಾರಿಗಿದೆ? ಅವರಿವರಿಂದ ನನ್ನನ್ನು ಕೊಲ್ಲಿಸಬೇಡ. ನೀನೆ ಇರಿದು ಕೆಡಹಿಬಿಡು. ಇಗೋ, ಕಠಾರಿ" ಎಂದು ಅತಿ ದೈನ್ಯದಿಂದ ಬೇಡಿಕೊಂಡನು.

ಅವನ ಆ ಅವಸ್ಥೆಯನ್ನೂ ಅಂಗಚೇಷ್ಟೆಯನ್ನೂ ಕಂಡು ಅರ್ಜುನನಂಥ ಗಂಭೀರ ಪುರುಷನಿಗೂ ನಗು ಒತ್ತರಿಸಿ ಬಂತು. ಒಡಲೊಡೆಯುವಂತೆ ಉಕ್ಕುವ ಆ ನಗುವನ್ನು ತಡೆದುಕೊಂಡು, "ಎಲವೋ, ನೀನು ಸಭೆಯಲ್ಲಿ ಹೆಂಗಸರ ಮುಂದೆ ಬಾಯಿಗೆ ಬಂದಂತೆ ಹರಟಿದೆ. ಈಗ ಅದೇನಾಯಿತು? ಶತ್ರು ಸೇನೆಯನ್ನಿರಿಯದೆ ನಾಡ ನರಿಯ ಹಾಗೆ ನನ್ನ ಮುಂದೆ ಹಲ್ಲು ಕಿರಿದರೆ ಬಿಡುವೆನೆ? ಏಳು, ಕಾದು ಹೋಗು. ನಾಚಿಕೆಯಿರಬೇಡವೆ ನಿನಗೆ? ವೀರರಾದವರು ಈ ರೀತಿ ಜೀವಗಳ್ಳರ ದಾರಿ ಹಿಡಿಯುತ್ತಾರೆಯೆ? ನಾವು ನಪುಂಸಕರು; ಆದರೂ ಸಾವಿಗಂಜಿದೆವೇನು, ನೋಡು" ಎಂದು ಹಂಗಿಸಿದನು; ಚುಚ್ಚಿ ನುಡಿದನು.

ಉತ್ತರ ಆಕ್ಷಣವೆ, "ನಪುಂಸಕರು ನೀವಲ್ಲ, ನಾವು. ನೀವು ವೀರರು. ನಾವು ಸಾಯುವವರಲ್ಲ; ಬದುಕಬೇಕೆಂದಿರುವವರು. ಲೋಕದಲ್ಲಿರುವ ಜೀವಗಳ್ಳರಿಗೆಲ್ಲ ನಾವೇ ಗುರುಗಳು" ಎಂದು ಉತ್ತರಕೊಟ್ಟನು. "ನನ್ನನ್ನು ಕಳಿಸಿಬಿಡು" ಎಂದು ನಾಚಿಕೆ ಬಿಟ್ಟು ಕೇಳಿಕೊಂಡನು.

"ನಿಮ್ಮ ತಂದೆ ದೊಡ್ಡ ಹೆಸರು ಪಡೆದಿರುವ ದೊರೆ. ನಿನಗೆ ಈಗ ಯುದ್ಧ ಮಾಡುವ ಸಮಯ; ಒಳ್ಳೆಯ ಏರುಜವ್ವನ. ಈಗ ಹೀಗೆ ಮಾಡಿದರೆ ಅಪಕೀರ್ತಿ ತಪ್ಪದು. ನರಕುರಿಯ್ತೀ, ನಡೆ ಕಾಳಗಕ್ಕೆ" ಎಂದು ನುಡಿಯುತ್ತ ಅರ್ಜುನ ಉತ್ತರನನ್ನು ಎಳೆದುಕೊಂಡು ಬಂದನು. ಯುದ್ಧಕ್ಕೆ ಹಿಂಜರಿದರೆ ಆಗುವ ಕೇಡನ್ನೂ ಮುನ್ನುಗ್ಗಿದರೆ ದೊರೆಯುವ ಮೇಲನ್ನೂ ವಿವರಿಸಿದನು: "ಕಾಳಗಕ್ಕೆ ಬಂದು ಓಡಿಹೋದರೆ, ಹೆಜ್ಜೆಗೊಂದು ಮಹಾ ಪಾತಕ ಸುತ್ತಿಕೊಳ್ಳುತ್ತದೆ. ಮನವೊಲಿದು ಮುನ್ನುಗ್ಗಿ ಕಾದಿದರೆ ಹೆಜ್ಜೆ ಹೆಜ್ಜೆಗೂ ಒಂದೊಂದು ಅಶ್ವಮೇಧ ಯಜ್ಞದ ಫಲ ದೊರಕುತ್ತದೆ. ಕಾದಿಮಡಿದರೆ ಆ ಶೂರನಿಗೆ ದೇವಸ್ತ್ರೀಯರು ತೊತ್ತುಗಳಾಗುತ್ತಾರೆ; ದೇವೇಂದ್ರನೇ ಅವನ ಬಿರುದುಗಳನ್ನು ಗ್ಗಡಿಸುತ್ತಾನೆ. ಇಷ್ಟು ಮಹಿಮೆಯನ್ನು ತರುವ ವೀರ ಸ್ವರ್ಗವುಂಟಾಗುತ್ತದೆ" ಎಂದು ಆಸೆ ತೋರಿಸಿದನು.

ಉತ್ತರ ಪಾತಕಕ್ಕೆ ಹೆದರಲಿಲ್ಲ; ಸ್ವರ್ಗಭೋಗಕ್ಕೆ ಮರುಳಾಗಲಿಲ್ಲ. "ಯುದ್ಧದಲ್ಲಿ ಓಡಿದ್ದರಿಂದ ಬಂದ ಪಾತಕವನ್ನು ಬ್ರಾಹ್ಮಣರು ಕಳೆಯುತ್ತಾರೆ. ಅಶ್ವಮೇಧವನ್ನು ಪ್ರತ್ಯಕ್ಷವಾಗಿಯೇ ಮಾಡಬಹುದು; ಉಪಾಯದಿಂದ ಅದರ ಫಲವನ್ನೇನು ಪಡೆಯಬೇಕಾಗಿಲ್ಲ. ದೇವಸ್ತ್ರೀಯರನ್ನೊಲ್ಲೆ. ನನಗೆ ನಮ್ಮರಮನೆಯ ನಾರಿಯರೇ ಸಾಕು. ನಮ್ಮ ದೊರೆತನವೇ ನಮಗೆ ಇಂದ್ರಪದವಿ. ನನ್ನನ್ನು ಬಿಟ್ಟು ಕಳಿಸು" ಎಂದು ಅಂಗಲಾಚಿದನು.

"ವೈ ಕೈ ಬೆಳಸಿಕೊಂಡು ಮನೆಯಲ್ಲಿ ಸೂಳೆಯರ ಮುಂದೆ ಸಿಕ್ಕಿದಂತೆ ಪರಾಕ್ರಮದ ಮಾತಾಡಿ ಬಂದು, ಇಲ್ಲಿ ಬಾಣವನ್ನೂ ಬಿಡದೆ ಕಾಲ ವೇಗ ತೋರಿಸಿ ಬದುಕಿ ಓಡಿಹೋದರೆ, ಆಮೇಲೆ ನಿನ್ನೋಲಗದಲ್ಲಿ ಕೂರುವುದಕ್ಕೆ ನಿನಗೆ ನಾಚಿಕೆಯಾಗುವುದಿಲ್ಲವೆ?" ಎಂದು ಅರ್ಜುನ ಚುಚ್ಚಿ ನುಡಿದನು. ಉತ್ತರ ಅದಕ್ಕೂ ಜಗ್ಗಲಿಲ್ಲ. "ನಾಚಿಕೆಯ ಮಾತನ್ನು ನನಗೆ ಹೇಳಬೇಡ. ಕಾಳಗ ಮಾಡಲು ನಾನಂಜುತ್ತೇನೆ. ನೀನು ನಮ್ಮ ಅನ್ನವುಂಡವನು.

ಶತ್ರುವಿನ ಹಾಗೆ ನೀನೆ ನನಗೆ ಮೃತ್ಯುವಾಗುವುದು ಸರಿಯೆ? ನನ್ನನ್ನು ಕೊಲ್ಲದೆ ಬಿಟ್ಟು ಕಳಿಸು. ನೀನು ಕೇಳಿದ್ದು ಕೊಡುತ್ತೇನೆ. ಅಗ್ರಹಾರ ಮಾನ್ಯಾದಿಗಳು ಬೇಕೆ? ಏಕಾವಳಿಯಲಂಕಾರಗಳು ಬೇಕೇ? ರಥ ಬೇಕೆ? ಲಲನೆಯರು ಬೇಕೆ? ಏನು ಬೇಕು ಹೇಳು. ನಾನು ಅರಮನೆಯಲ್ಲಿ ಅದನ್ನೆಲ್ಲ ನಿನಗೆ ಈಸಿ ಕೊಡುತ್ತೇನೆ. ಈಗಲಾದರೂ ಬಿಡು ನನ್ನನ್ನು" ಎಂದು ಕಾಡಿದನು. ಪಾರ್ಥನು ಸಮ್ಮತಿಸದಿರಲು, "ಎಲೆ ಬೃಹನ್ನಳೀ, ನಮ್ಮ ತಂದೆ ನಿನ್ನನ್ನು ಕಾಪಾಡಿದ್ದಕ್ಕೆ ಬಹುಬೇಗ ಪ್ರತ್ಯುಪಕಾರ ಮಾಡಿದೆ. ಕಲ್ಲು ಮನಸ್ಸಿನವನಾದೆಯಲ್ಲಾ!" ಎಂದು ನಿಟ್ಟುಸಿರು ಬಿಡುತ್ತ ನಿಂದಿಸಿದನು.

"ಎಲಾ, ದೊರೆಗಳ ಹೊಟ್ಟೆಯಲ್ಲಿ ಹುಟ್ಟಿ ಕಾಳಗದಲ್ಲಿ ಹೀಗೆ ಒಡಲಿ ಸಾಸೆಗೆ ಮರುಗಿದವರು ಹಿಂದೂ ಇಲ್ಲ, ಮುಂದೂ ಇಲ್ಲ. ಮನುಷ್ಯ ಬಂಜೆ ಮಾತನ್ನಾಡಬಹುದೆ? ಅಂಥವನ ಬಾಳನ್ನು ಸುಡಬೇಕು! ಎಲವೋ ರಾಜ ಬಾಹಿರ, ರಥದ ಬಳಿಗೆ ನಡೆ. ನೀನೇನು ಕಾದಬೇಡ, ಬಾ. ಮಾರ್ಬಲದೊಡನೆ ನಾನು ಕಾಳಗ ಮಾಡುತ್ತೇನೆ. ನೀನು ಸಾರಥಿಯಾಗು; ಸಾಕು" ಎಂದು ಉತ್ತರನಿಗೆ ಧೈರ್ಯ ಹೇಳಿ ಅವನ ಅಂಜಿಕೆಯನ್ನು ಹೋಗಲಾಡಿಸಲು ಯತ್ನಿಸಿದನು.

ಉತ್ತರನಿಗೆ ನಂಬಿಕೆಯಾಗಲಿಲ್ಲ. ತನ್ನನ್ನು ರಣಕ್ಕೆ ನೂಕಲು ಇದು ಇನ್ನೊಂದು ತಂತ್ರವೆಂದು ಭಾವಿಸಿದನು. "ಈ ಮೊದಲು ನೀನು ಯಾವ ರಾಜರನ್ನು ಕಾದಿ ಗೆದ್ದಿರುವೆ? ಹುಲು ಬೃಹನ್ನಳೀ, ನೀನು ನಪುಂಸಕ. ನಿನಗೆ ಈ ಕದನ ನಾಟ್ಯ ವಿದ್ಯವಲ್ಲ. ನನ್ನ ಓರಗೆಯ ಹುಡುಗರಿಗೆ ಇನ್ನೂ ತೇರು ನಡಸುವುದಕ್ಕೇ ಬರುವುದಿಲ್ಲ. ನನ್ನನ್ನು ಸಾರಥಿ ಮಾಡಿಕೊಂಡು ಈ ಬಲವನ್ನು ಜಯಿಸುವೆಯಾ? ಚೆನ್ನಾಯ್ತು. ಈ ಉಪಾಯ ಸಾಕು. ನನ್ನನ್ನು ಕಳಿಸಿಬಿಡು" ಎಂದು ಮತ್ತೆ ಅದೇ ರಾಗ ಎತ್ತಿದನು.

ಅರ್ಜುನನಿಗೆ ಇನ್ನು ತಡೆಯಲಾಗಲಿಲ್ಲ. "ಎಲವೋ! ಸಾರಥಿಯಾಗು, ನಡೆ. ಇನ್ನೇನಾದರೂ ಗಳಹಿದೆಯೋ, ನಿನ್ನ ಕಟವಾಯಿ ಕುಯ್ದುಬಿಡುತ್ತೇನೆ. ಮಾರೊಡ್ಡಿ ನಿಂತಿರುವ ಈ ಪ್ರತಿಭಟರನ್ನೆಲ್ಲ ಕೊಲ್ಲುತ್ತೇನೆ; ನಿನ್ನಾಣೆ. ಆಮೇಲೆ ನಗುವೆಯಂತೆ! ಈಗ ತೆಪ್ಪಗಿರು" ಎಂದು

ಬಿರುನುಡಿ ನುಡಿದು ಜುಟ್ಟು ಹಿಡಿದುಕೊಂಡು ಹೆಡತಲೆಯನ್ನು ಅವುಕಿ ಎಳೆದುಕೊಂಡು ಬಂದು ರಥದ ಮೇಲೆ ಹತ್ತಿಸಿದನು. ಬಳಿಕ, ಅಂಜಿದ ಉತ್ತರನಿಗೆ ಪರಿಪರಿಯಾಗಿ ಧೈರ್ಯಹೇಳಿ ಕಲಿಯಾಗಿ ಮಾಡಿಕೊಂಡು ತಮ್ಮ ಶಸ್ತ್ರಾಸ್ತ್ರಗಳನ್ನಿಟ್ಟಿದ್ದ ಶಮಿಯ ಬಳಿಗೆ ಕರೆದುಕೊಂಡು ಹೋದನು.

ಬನ್ನಿಯ ಮರದ ಬಳಿ ರಥದಿಂದಿಳಿದು, "ಈ ಮರದ ಮೇಲೆ ಪಾಂಡವರು ತಮ್ಮ ಶಸ್ತ್ರಾಸ್ತ್ರಗಳನ್ನಿಟ್ಟಿದ್ದಾರೆ. ಮರ ಹತ್ತಿ ತೆಗೆದುಕೊಡು" ಎಂದು ಉತ್ತರನನ್ನು ಕೇಳಿದನು. ಉತ್ತರನಿಗೆ ಮರದ ಕೊಂಬೆಯಿಂದ ನೇತಾಡುವ ಹೆಣವೊಂದಲ್ಲದೆ ಮತ್ತೇನೂ ಕಾಣಿಸಲಿಲ್ಲ. "ಬೃಹನ್ನಳೀ, ಅರಸು ಮಕ್ಕಳು ಹೆಣ ಮುಟ್ಟುವುದು ಅನುಚಿತ. ಬೇರೆ ಯಾವ ಕೆಲಸವನ್ನಾದರೂ ಹೇಳು, ಮಾಡುತ್ತೇನೆ" ಎಂದನು. ಅದು ಹೆಣವಲ್ಲವೆಂದೂ ಮೇಲುಗಡೆ ತೊಗಲು ಬಿಗಿದಿರುವ ಆಯುಧಗಳ ಕಟ್ಟೆಂದೂ ಅರ್ಜುನ ತಿಳಿಯಹೇಳಲು ಉತ್ತರ ಮರ ಹತ್ತಿದನು.

ಹತ್ತಿ ಕಟ್ಟಿನ ಹುರಿಗಳನ್ನು ಹರಿದನು. ಕೂಡಲೆ ಬರಸಿಡಿಲಿನಂತೆ ಮಸಗುವ ಆ ದಿವ್ಯಾಯುಧಗಳ ತೀವ್ರ ಪ್ರಭೆಯಲ್ಲಿ ಸಿಕ್ಕಿಕೊಂಡು ನೋಡಲಾರದೆ ನಡುಗುತ್ತ ನಿಂತನು. ಮುಟ್ಟಲಾರ, ಬಿಟ್ಟಿಳಿಯಲೂ ಆರ. ಬಿಡಿಸಿಕೊಳ್ಳೆಂದು ಸಾರಥಿಗೆ ಮೊರೆಯಿಟ್ಟನು. ಸಾರಥಿ ಅರ್ಜುನನ್ನು ನೆನೆಯುತ್ತ ಕೈಯಿಕ್ಕಿದರೆ ಆಯುಧಗಳು ವಶವಾಗುವುವೆಂದು ತಿಳಿಸಿ ಅಂಜಿಕೆಯನ್ನು ಹೋಗಲಾಡಿಸಿದನು. ಉತ್ತರಕುಮಾರ ಪಾರ್ಥನನ್ನು ಸ್ಮರಿಸುತ್ತ ಕೈ ನೀಡಲು ಉಗ್ರಾಯುಧಗಳು ಸೌಮ್ಯವಾದವು.

ರಾಜಪುತ್ರನು ಒಂದೊಂದಾಗಿ ಆಯುಧಗಳನ್ನು ಎತ್ತಿಕೊಡಲು ಮೊದಲು ಮಾಡಿದನು. ಎತ್ತಹೋದರೆ ಒಂದೂ ಸುಲಭವಾಗಿ ಕೈಗೆ ಬಾರದು. ತನ್ನ ಬಲವನ್ನೆಲ್ಲ ಬಿಟ್ಟು ಅವುಕಿ, ಕಷ್ಟಪಟ್ಟು ತೆಕ್ಕೆಯಲ್ಲಿ ತಬ್ಬಿ ತೆಗೆದುಕೊಡುವುದರಲ್ಲಿ ಉತ್ತರನಿಗೆ ಸಾಕುಸಾಕಾಯಿತು; ಮೈ ಬೆವರಿಟ್ಟಿತು; ಅಳ್ಳೆ ಹೊಡೆದುಕೊಳ್ಳತೊಡಗಿತು. ಅಷ್ಟು ಕಷ್ಟಪಟ್ಟು ಎತ್ತಿ ಕೊಟ್ಟ ಬಿಲ್ಲನ್ನು ಬೃಹನ್ನಳೆ ಸ್ವಲ್ಪವೂ ಆಯಾಸವಿಲ್ಲದೆ ಲೀಲೆಯಿಂದ ಹಿಡಿದಾಡಿಸುವುದನ್ನು ಕಂಡು ಆಶ್ಚರ್ಯಾಶ್ಚರ್ಯವಾಯಿತು. "ನೀನು ಸಮರ್ಥ, ನಿನಗೆ ಶರಣು" ಎಂದು ಅವನಿಗೆ ಕೈ ಮುಗಿದನು. ಆಮೇಲೆ ಆ ಆಯುಧಗಳಲ್ಲಿ ಯಾವಯಾವುದು ಯಾರು

ಯಾರದ್ದೆಂಬ ವಿವರವನ್ನೆಲ್ಲ ಕೇಳಿದನು. ಅರ್ಜುನನು ವಿವರಿಸಿ ಹೇಳಿದನು.

ಉತ್ತರನಿಗೆ ಬೆರಗು; ಬೆರಗಿನ ಜೊತೆಗೆ ಸಂಶಯ. "ಪಾಂಡವರ ಈ ಗುಟ್ಟನ್ನು ಬಲ್ಲ ನೀನು ಯಾರು? ಅರ್ಜುನನೇ? ಭೀಮನೆ? ನಕುಲನೇ? ಸಹದೇವನೆ? ಮಹಾತ್ಮನಾದ ಯುಧಿಷ್ಠಿರನೆ? ಅಥವಾ ಅವರ ಬಂಧುವೆ? ತಿಳಿಸು" ಎಂದು ಬೇಡಿದನು. ಆಗ ಆತನು, "ಹೌದು, ನಾನು ಅರ್ಜುನ. ಕಂಕಯತಿ ಯುಧಿಷ್ಠಿರ; ಬಾಣಸದ ವಲಲನೆ ಭೀಮ; ನಿಮ್ಮ ಗೋಕುಲವನ್ನು ಕಾಯುವವನು ನಕುಲ; ಅಶ್ವಾಧ್ಯಕ್ಷನಾಗಿರುವವನು ಸಹದೇವ; ನಿಮ್ಮಂತಃಪುರದಲ್ಲಿ ಸೈರಂಧ್ರಿಯಾಗಿರುವಾಕೆಯೆ ನಮ್ಮರಸಿ ದ್ರೌಪದಿ" ಎಂದು ತನ್ನೆಲ್ಲರ ಪರಿಚಯವನ್ನೂ ಹೇಳಿದನು. ಉತ್ತರನ ಸಂಶಯಗಳನ್ನೆಲ್ಲ ಪರಿಹರಿಸಿ ನಂಬಿಕೆಯಾಗುವಂತೆ ಮಾಡಿದನು. ಕಡೆಗೆ ನಂಬಿಕೆಯಾಗಲು ಉತ್ತರ ಕುಮಾರ ಅರ್ಜುನನ ಅಡಿಗೆರಗಿ, "ಉಳಿದವರಿಗೆ ಈ ಮಹಿಮೆಯೆಲ್ಲಿಯದು? ಬದುಕಿದ್ದರೆ ಅತಿಶಯವನ್ನು ಕಾಣಬಹುದೆಂಬ ನುಡಿ ನಿಜವಾಯಿತು. ನಾನು ತಿಳಿವಳಿಕೆಯಿಲ್ಲದೆ ಹಲವು ತಪ್ಪು ಮಾತನ್ನಾಡಿದ್ದೇನೆ. ಅವನ್ನೆಲ್ಲ ಮನ್ನಿಸಿ ಕಾಪಾಡಬೇಕು" ಎಂದು ಬೇಡಿಕೊಂಡನು. ಅರ್ಜುನನು ಹಿಡಿದೆತ್ತಿ ತಲೆ ಸವರುತ್ತ "ನಿನ್ನ ಮೇಲೆ ತಪ್ಪಿಲ್ಲ" ಎಂದು ಕ್ಷಮೆ ನುಡಿದು ಸಮಾಧಾನ ಪಡಿಸಿದನು.

ಬಳಿಕ ಬಳೆಗಳನ್ನು ನೆಗ್ಗಿ, ಹೆಣ್ಣುಡೆಯನ್ನು ತೊರೆದು ವೀರವೇಷವನ್ನು ಧರಿಸಿದನು. ನೆನೆದ ಕೂಡಲೆ ಪಾರ್ಥನ ದಿವ್ಯ ರಥಾಶ್ವಗಳು ಬಂದು ನಿಂತವು; ಕಪಿವೀರನು ಧ್ವಜಾಗ್ರದಲ್ಲಿ ಮಂಡಿಸಿದನು. ಗಾಂಡೀವ ಧನುಸ್ಸನ್ನು ಹಿಡಿದು ಅಕ್ಷಯವಾದ ಬತ್ತಳಿಕೆಗಳನ್ನು ಬೆನ್ನಿಗೆ ಕಟ್ಟಿ ಕಲಿಪಾರ್ಥ ರಥವನ್ನು ಹತ್ತಿದನು. ಉತ್ತರ ಕುಮಾರ ಅಂಜಿಕೆ ತೊರೆದು ರಥ ನಡಸಿದನು.

ಉತ್ತರ ಸಾರಥ್ಯಮಾಡುತ್ತಿರಲು ಅರ್ಜುನನು ಕುರುಸೇನೆಯ ಮೇಲೆ ಸಾಗಿ ಬಂದನು. ಈಗ ಕಾದ ಬಂದವನು ಅರ್ಜುನನೆಂಬುದನ್ನು ಭೀಷ್ಮ ದ್ರೋಣಾದಿಗಳು ಹಲವು ಸೂಚನೆಗಳಿಂದ ಅರಿತುಕೊಂಡರು. ಅರ್ಜುನನು ಪ್ರಕಟವಾಗಿ ಕಾಣಿಸಿಕೊಂಡರೆ ಮೊದಲಿನ ನಿಯಮದಂತೆ ಮತ್ತೆ ಪಾಂಡವರು ಅರಣ್ಯವಾಸಕ್ಕೆ ನಡೆಯಬೇಕಾಗುವುದೆಂದು ದುರ್ಯೋಧನ ಹರ್ಷಿಸಿದನು. ಭೀಷ್ಮರು ಲೆಕ್ಕಮಾಡಿ, "ನಿನ್ನಿನ ಹಗಲು ನಿನ್ನದು; ಇಂದಿನದು ಅವರದು. ಈಗ ಅವಧಿ ಮುಗಿದಿದೆ." ಎಂದು ನಿರ್ಣಯ ಹೇಳಿದರು. ಅರ್ಜುನನೊಡನೆ

ಕದನ ತೊಡಗಿತೆಂದು ಕೌರವರು ತಕ್ಕ ಸಿದ್ಧತೆ ಮಾಡಿಕೊಂಡರು. ಸೇನೆಯನ್ನು ಎರಡು ಭಾಗಮಾಡಿ ಒಂದು ಅರ್ಜುನನನ್ನೆದುರಿಸಬೇಕೆಂದೂ ಮತ್ತೊಂದು ತುರುವಿಂಡಿನೊಡನೆ ದುರ್ಯೋಧನನ ನಾಯಕತ್ವದಲ್ಲಿ ಹಸ್ತಿನಾವತಿಗೆ ನಡೆಯ ಬೇಕೆಂದೂ ಗೊತ್ತಾಯಿತು. ಆ ಹಂಚಿಕೆಯನ್ನರಿತು ಪಾರ್ಥನು ತನ್ನನ್ನೆದುರಿಸಿ ನಿಂತ ಪಡೆಯನ್ನು ತಾಕದೆ ಹೊರಳಿ ನಡೆದು ಮೊದಲು ಕುರುರಾಯನ ಮೇಲೆ ನುಗ್ಗಿದನು. ತನ್ನ ಅಮೋಘ ಬಾಣಗಳಿಂದ ಆ ದಂಡನ್ನು ಚೆದರಿಸಿ ಗೋವು ಗಳನ್ನು ಬಿಡಿಸಿ ಹಿಂದಿರುಗಿಸಿದನು. ಬಳಿಕ ಕೌರವನ ಸೇನಾಸಾಗರವನ್ನು ಹೊಕ್ಕು ಕಲಕಿ ವೀರರೆಲ್ಲರಿಗೂ ತನ್ನ ಬಾಣದ ರುಚಿ ತೋರಿಸಿದನು. ಕಡೆಗೆ ಸಮ್ಮೋಹನಾಸ್ತ್ರವನ್ನು ಪ್ರಯೋಗಿಸಿ ಎಲ್ಲರೂ ಮೈ ಮರೆದೊರಗುವಂತೆ ಮಾಡಿದನು.

ತರುವಾಯ ಉತ್ತರನೊಡನೆ ರಥದಿಂದಿಳಿದು ಬಂದು ದ್ರೋಣ ಭೀಷ್ಮರ ಪಾದಗಳ ಮೇಲೆ ತಲೆಯಿಟ್ಟು ನಮಸ್ಕಾರ ಮಾಡಿದನು. ಉತ್ತರನು ಅರ್ಜುನನ ಸೂಚನೆಯನ್ನನುಸರಿಸಿ ದುರ್ಯೋಧನ ಕರ್ಣ ದುಶ್ಶಾಸನಾದಿ ವೀರರ ವಸ್ತ್ರಾ ಭರಣಗಳನ್ನು ಕಳಚಿ ತೆಗೆದುಕೊಂಡು ರಥದಲ್ಲಿ ತಂದಿಟ್ಟನು. ಬಳಿಕ ಇಬ್ಬರೂ ರಥವನ್ನು ಹತ್ತಿ ಬನ್ನಿಯ ಮರದೆಡೆಗೆ ನಡೆದರು.

ಅಲ್ಲಿ ಆಯುಧಗಳನ್ನಿಟ್ಟು ಅರ್ಜುನನು ತನ್ನ ದಿವ್ಯ ರಥವನ್ನು ಬಿಟ್ಟು ವಿರಾಟಪಟ್ಟಣದಿಂದ ತಂದಿದ್ದ ಹುಲುರಥವನ್ನೆ ಸಜ್ಜುಮಾಡಿ ಮತ್ತೆ ಸಾರಥಿ ತನವನ್ನು ಅಳವಡಿಸಿಕೊಂಡನು. ನಗುನಗುತ್ತ ಉತ್ತರನನ್ನು ಕುರಿತು, "ದೂತರನ್ನು ಕಳೆದು ಇಂದಿನ ಕಾಳಗವನ್ನು ನೀನೆ ಗೆದ್ದುದಾಗಿ ಸುದ್ದಿ ಕಳಿಸು. ನನ್ನ ವಿಚಾರವನ್ನು ಇಂದು ತಿಳಿಸಬೇಡ. ಈ ದಿನ ನಿನ್ನ ಪರಾಕ್ರಮವನ್ನು ಪ್ರಸಾರಮಾಡು. ಅರಸ ನಿನ್ನನ್ನೆ ಮನ್ನಿಸಲಿ. ಪುರಜನರೂ ಪರಿಜನರೂ ನಿನ್ನ ವಿಜಯದಿಂದ ಹರ್ಷಿತರಾಗಿ ತಣಿಯಲಿ" ಎಂದು ತಿಳಿಸಿ ಅದಕ್ಕೆ ಅವನನ್ನು ಒಡಂಬಡಿಸಿದನು.

ಅತ್ತ ಸುಶರ್ಮನ ಕಾಳಗದಿಂದ ಹಿಂದಿರುಗಿದ ವಿರಾಟೇಶ್ವರನು ಅರಮನೆ ಯಲ್ಲಿ ಮಗನನ್ನು ಕಾಣದೆ, ನಪುಂಸಕನನ್ನು ಸಾರಥಿ ಮಾಡಿಕೊಂಡು ಅವನು ಕೌರವ ಸೇನೆಯ ಮೇಲೆ ನಡೆದನೆಂದು ಕೇಳಿ ಕಳವಳಪಡುತ್ತಿದ್ದನು. ಅಷ್ಟ ರಲ್ಲಿ ಕರ್ಣ ದ್ರೋಣ ಭೀಷ್ಮಾದಿ ಕುರುಬಲವನ್ನೆಲ್ಲ ಗೆದ್ದು ಉತ್ತರ ಕುಮಾರ

ವಿಜಯಿಯಾಗಿ ಬರುತ್ತಿರುವನೆಂದು ದೂತರು ಬಂದು ಬಿನ್ನಯಿಸಿದರು. ಕೇಳಿ ದೊರೆ ಹಿಗ್ಗಿದನು. ಪಟ್ಟಣವನ್ನಲಂಕರಿಸಿ ಕುಮಾರನನ್ನು ಎದುರು ಗೊಂಡು ಕರೆತರಬೇಕೆಂದು ಅಪ್ಪಣೆ ಮಾಡಿದನು.

ಕುರುಬಲವನ್ನು ಗೆದ್ದು ಬಂದ ವೀರಕುಮಾರನನ್ನು ನೋಡಲೆಂದು ಜನ ನೆರೆದು ನೂಕು ನುಗ್ಗಾಯಿತು. ಮಂಗಳ ವಾದ್ಯಗಳು ಭೋರ್ಗರೆದು ಮೊಳಗು ತ್ತಿರಲು ಮಂತ್ರಿಗಳು ಸಂಭ್ರಮದಿಂದ ಬಂದು ರಾಜಕುಮಾರನನ್ನು ಎದುರು ಗೊಂಡರು. ಸುಮಂಗಲಿಯರು ಮುತ್ತಿನಾರತಿಯೆತ್ತಿ ಸೇಸೆಯಿಕ್ಕಿದರು. ಪುರ ಜನರೆಲ್ಲರೂ ಗುಂಪುಗುಂಪಾಗಿ ಹರ್ಷದಿಂದುಬ್ಬಿ ಜಯಘೋಷ ಮಾಡು ತ್ತಿದ್ದರು. ಆದರೂ ಉತ್ತರನ ಮುಖದಲ್ಲಿ ಕಳೆಯಿಲ್ಲ, ಗೆಲವಿಲ್ಲ. ಬಿರುದುಗ್ಗಡಿಸಿ ಹೊಗಳುವ ಕೈವಾರಿಗಳಮೇಲೆ ಕೋಪಿಸುತ್ತ ಕತ್ತೆತ್ತದೆ ನೆಲದ ಮೇಲೆ ನೋಟ ನೆಟ್ಟು ದುಗುಡದ ಭಾರವನ್ನು ಹೊತ್ತು ಅರಮನೆಯನ್ನು ಸೇರಿದನು. ಅಲ್ಲಿ ತಂದೆ ಎದುರುಬಂದು ಮಗನನ್ನು ಬಾಚಿ ತಬ್ಬಿಕೊಂಡನು. ಬಿಗಿಯಪ್ಪಿ, "ಬಾ, ಮಗನೇ! ವಸುಕುಲದ ಚಿಂತಾಮಣಿಯೇ! ಕುರುರಾಯ ಮೋಹರ ಧೂಮಕೇತುವೆ! ಕಂದ, ಬಾ" ಎಂದು ಮನದಣಿಯ ಕೊಂಡಾಡಿದನು. ಲಲನೆಯರು ಆರತಿ ಬೆಳಗಿ ನಿವಾಳಿ ತೆಗೆದರು.

ಉತ್ತರನಿಗೆ ಈ ಉಪಚಾರಗಳಿಂದ ಸುಖವಿಲ್ಲವಾಯಿತು. ''ಅಪ್ಪಾ, ಸಾಕು. ಇದೆಲ್ಲ ನನಗೆ ಬರಿಯ ಬಯಲಾಡಂಬರ. ಈ ವೀರೋಪಚಾರ ನನಗೊಪ್ಪುದಿಲ್ಲ. ನಿಲ್ಲಿಸಿ ಬಿಡಿ'' ಎಂದನು. ಅರಸನಿಗೆ ಆನಂದ ಮಿಗಿಲಾ ಯಿತು. "ದರ್ಪವುಳ್ಳವನಿಗೆ ಈ ಮಂಗಳ ಒಪ್ಪುವುದಿಲ್ಲವೆ? ನಿಜವಾಗಿ ನೋಡಿದರೆ ಈ ಬಲ, ಈ ನಿಗರ್ವಿತೆ, ಯಾರಿಗಿದೆ?" ಎಂದು ಮಗ ನನ್ನು ಮತ್ತೆ ಪ್ರಶಂಸಿಸಿದನು. "ಮಗನೇ, ಕರ್ಣಾದಿ ವೀರರನ್ನೆಲ್ಲ ನೀ ನೊಬ್ಬನೆ ಗೆದ್ದು ಬಂದೆ. ಇಂಥ ಕಲಿತನ ಪೂರ್ವಪುರುಷರಲ್ಲಿ ಯಾರಿ ಗುಂಟು? ಇಷ್ಟಾದರೂ ನಿನಗೆ ಅದೇಕೆ ದುಗುಡ? ಹೆತ್ತವರಿಗೆ ಹರ್ಷವನ್ನು ತಂದೆ.'' ಎಂದು ಪ್ರೀತಿಯಿಂದ ಮುಖವನ್ನು ಹಿಡಿದೆತ್ತಿದನು.

ಆಗ ಉತ್ತರ, "ಕಾದಿ ಗೆದ್ದವನು ಬೇರೊಬ್ಬ, ನಾನಲ್ಲ. ನಾನು ಸಾರಥಿ ಮಾತ್ರ. ನನಗೇಕಿಷ್ಟು ಮರ್ಯಾದೆ? ನನ್ನನ್ನು ನಾಚಿಸಬೇಡಿ'' ಎಂದು ಬೇಡಿದನು. ವಿರಾಟೇಶ್ವರನಿಗೆ ಅದು ನಿಜವಾಗಿ ತೋರಲಿಲ್ಲ. 'ಕಾದಿ

ದಾತ ನೀನು ; ಸಾರಥಿ ಆ ಬೃಹನ್ನಳೆ. ವಾದ ಬೇಡ. ಮಗನೇ, ನಿನ್ನ ಪರಾಕ್ರಮವನ್ನು ನಾನು ಬಲ್ಲೆ" ಎಂದು ಉಬ್ಬಿ ನುಡಿದನು. "ನನಗೆ ಆ ದಿಟ್ಟತನವೆಲ್ಲಿ ಬರಬೇಕು? ಬೆಂದದ್ದನ್ನು ಬೆದಕಿ ನೋಯಿಸಬೇಡಿ. ಈ ದಿನದ ಕಾಳಗವನ್ನು ಗೆದ್ದಾತ ಬೇರೊಬ್ಬನಿದ್ದಾನೆ. ನಾಳೆ ಬೆಳಗ್ಗೆ ಆತನನ್ನು ನಿಮ್ಮೆದುರಿಗೆ ಕರೆತಂದು ತೋರಿಸುತ್ತೇನೆ" ಎಂದು ನಂಬಿಸಿ ನುಡಿದು, ತಂದೆಯನ್ನು ಬೀಳ್ಕೊಂಡು ತನ್ನರಮನೆಗೆ ಹೋಗಿ ಸೇರಿದನು.

ಅರ್ಜುನನು ಉತ್ತರೆಯ ಮಂದಿರಕ್ಕೆ ಹೋಗಿ ರಣರಂಗದಿಂದ ತಾನು ತಂದಿದ್ದ ಉತ್ತಮಾಂಬರಗಳನ್ನೂ ವಿವಿಧ ರತ್ನಾಭರಣಗಳನ್ನೂ ಆಕೆಗೆ ಕೊಟ್ಟನು. ಅವನ್ನೆಲ್ಲ ಕಂಡು ಆಕೆ ಮಿಗಿಲಾಗಿ ಹಿಗ್ಗಿದಳು.

ಆ ರಾತ್ರಿ ಪಾಂಡುಕುಮಾರರೆಲ್ಲ ಒಟ್ಟುಗೂಡಿ ಆಲೋಚಿಸಿ ತಮ್ಮ ವೇಷಗಳನ್ನು ತೊರೆದು ಮರುದಿನ ಓಲಗದಲ್ಲಿ ಪ್ರಕಟವಾಗಿ ಕಾಣಿಸಿಕೊಂಡರು. ಉತ್ತರ ಕುಮಾರ ಉತ್ತರಗೋಗ್ರಹಣದ ವಿಜಯದ ನಿಜವನ್ನು ವಿವರಿಸಿ, ಪಾಂಡವರನ್ನು ತಂದೆಗೆ ತೋರಿಸಿ ಅವರನ್ನು ವಿರೋಚಿತವಾಗಿ ಗೌರವಿಸಿದನು.

## ಹಿನ್ನುಡಿ

ರಾಮಾಯಣ ಮಹಾಭಾರತಗಳು ಭಾರತೀಯ ಸಂಸ್ಕೃತಿಯ ಎರಡು ಕಣ್ಣುಗಳು. ಸಾವಿರಾರು ವರ್ಷಗಳಿಂದ ಜನಕ್ಕೆ ಇವು ತಿಳಿವು ಕೊಟ್ಟು ಬಾಳಿಗೆ ಬೆಳಕಾಗಿ ಮೆರೆಯುತ್ತಿವೆ. ಭರತ ಖಂಡದ ಬೇರೆ ಬೇರೆ ಭಾಷೆಗಳೆಲ್ಲಕ್ಕೂ ಇವು ಪರಿವರ್ತನೆಯಾಗಿವೆ. ಅರಿಯದವರಿಂದ ಹಿಡಿದು ಮಹಾ ವಿದ್ವಾಂಸರವರೆಗೂ ಎಲ್ಲ ಜನಕ್ಕೂ ಇವು ಮೆಚ್ಚಿಕೆಯಾಗಿ ಅವರ ಜೀವನದ ಹಾಸು ಹೊಕ್ಕಾಗಿ ಹರಡಿವೆ.

ಕನ್ನಡದಲ್ಲಿ ಮಹಾಭಾರತವನ್ನು ಬರೆದವರಲ್ಲೆಲ್ಲ ಪಂಪ, ನಾರಣಪ್ಪ—ಈ ಇಬ್ಬರು ತುಂಬ ಪ್ರಸಿದ್ಧರು. ಇವರಿಬ್ಬರೂ ಒಬ್ಬರಿಗೊಬ್ಬರು ಸರಿಮಿಗಿಲಾದವರು. ಪಂಪನ ಗ್ರಂಥ ಹಳಗನ್ನಡದಲ್ಲಿ ರಚಿಸಿರುವ ಚಂಪೂಕಾವ್ಯ. ನಾರಣಪ್ಪನು ರಚಿಸಿರುವುದು ನಡುಗನ್ನಡದ ಷಟ್ಪದೀ ಕಾವ್ಯ. ಇವೆರಡೂ ನಮ್ಮ ಕನ್ನಡ ಭಾಷೆಯ ಸರ್ವೋತ್ಕೃಷ್ಟ ಗ್ರಂಥಗಳು.

'ಪಂಪ ಭಾರತ' ತನ್ನ ಉತ್ತಮ ಗುಣಗಳಿಂದ ಉಳಿದ ಪೂರ್ವ ಕಾವ್ಯಗಳನ್ನೆಲ್ಲ ಮರಸಿಬಿಟ್ಟಿತು. ಆದರೂ ಅದು ಜನಸಾಮಾನ್ಯದಲ್ಲಿ ಬಳಕೆಗೆ ಬರಲಿಲ್ಲ.

ನಾರಣಪ್ಪನು ರಚಿಸಿದ 'ಗದುಗಿನ ಭಾರತ' ವಾದರೋ, ಈಗ ಕನ್ನಡ ನಾಡಿನ ಹಳ್ಳಿಹಳ್ಳಿಯಲ್ಲೂ ಮೆರೆಯುತ್ತಿದೆ. ಸಾಧಾರಣ ಜನರನ್ನು ನಲಿಸುತ್ತ, ಪಂಡಿತರನ್ನು ತಲೆದೂಗಿಸುತ್ತ ಎಲ್ಲರಿಗೂ ಮೆಚ್ಚಾಗಿದೆ. 'ಕನ್ನಡ ಭಾರತ'ವೆಂದು ಹೆಸರಾಗಿದೆ.

ನಾರಣಪ್ಪ ಪಂಪನಂತೆ ಮಹಾ ಪಂಡಿತ; ಹರಿಹರನಂತೆ ದೊಡ್ಡ ಭಕ್ತ. ಇವನ ಭಾರತ ಭಕ್ತಿರಸದ ಅಗಾಧ ಪ್ರವಾಹವಾಗಿದೆ. ಇದನ್ನು ಓದುವವರೂ ಕೇಳುವವರೂ ಭಕ್ತಿಯ ಪುಣ್ಯ ಜಲದಲ್ಲಿ ಮಿಂದು ಪುನೀತರಾಗುತ್ತಾರೆ. ಗದುಗಿನ ವೀರನಾರಾಯಣನ ಕಿಂಕರನಾಗಿ ಕಾವ್ಯರಚನೆ ಮಾಡಿದ್ದಾನೆ. 'ವೀರನಾರಾಯಣನೆ ಕವಿ, ತಾನು ಬರೆಯುವವನು ಮಾತ್ರ' ಎಂದು ಬಿನ್ನಯಿಸಿಕೊಂಡಿದ್ದಾನೆ.

ಇಲ್ಲಿ ಎತ್ತಿ ಕೊಟ್ಟಿರುವ ಉತ್ತರಕುಮಾರನ ಕಥೆ ಗದುಗಿನ ಭಾರತದಲ್ಲಿ ವಿವರಿಸಿರುವ ಉತ್ತರ ಗೋಗ್ರಹಣ ವೃತ್ತಾಂತದ ಸಂಗ್ರಹ. ಉತ್ತರಕುಮಾರನ ವಿಷಯವನ್ನು ಇಷ್ಟು ರಸವತ್ತಾಗಿ ಚಿತ್ರಿಸಿರುವವನು ನಾರಣಪ್ಪನೊಬ್ಬನೆ. ಪಂಪಭಾರತದಲ್ಲಾಗಲಿ ಸಂಸ್ಕೃತದ ಮೂಲ ಮಹಾಭಾರತದಲ್ಲಾಗಲಿ ಈ ಕಥೆ ಇಷ್ಟು ಸ್ವಾರಸ್ಯವಾಗಿ ಬಂದಿಲ್ಲ. ಇಲ್ಲಿ ಹಾಸ್ಯವನ್ನು ನಿರೂಪಿಸಿರುವಷ್ಟು ಸ್ವಾರಸ್ಯವಾಗಿಯೆ ನಾರಣಪ್ಪ ಬೇರೆ ಕಡೆಗಳಲ್ಲಿ ಶೃಂಗಾರ, ವೀರ ಮೊದಲಾದ ಉಳಿದ ರಸಗಳನ್ನೂ ನಿರೂಪಿಸಿದ್ದಾನೆ.

'ಕುಮಾರವ್ಯಾಸ' ಎಂಬುದು ನಾರಣಪ್ಪನ ಕಾವ್ಯನಾಮ. ಈತನು ಗದುಗಿನ ಹತ್ತಿರ ಇರುವ 'ಕೋಳಿವಾಡ' ಎಂಬ ಊರಿನ ಕರಣಿಕರ ವಂಶದವನಂತೆ. ಗದುಗಿನ ವೀರನಾರಾಯಣ ಸ್ವಾಮಿಯ ದೇವಸ್ಥಾನದಲ್ಲಿ ಭಾರತವನ್ನು ರಚಿಸಿದನಂತೆ. ಈತನ ಜೀವನಕ್ಕೆ ಸಂಬಂಧಿಸಿದ ಯಾವ ವಿವರವೂ ಸ್ಪಷ್ಟವಾಗಿ ಗೊತ್ತಿಲ್ಲ.

ಈತನಿದ್ದದ್ದು ಕ್ರಿ.ಶ. ೧೫ನೆಯ ಶತಮಾನದಲ್ಲಿ; ವಿಜಯನಗರದ ವೈಭವದ ಕಾಲದಲ್ಲಿ. ಅತನು ಕಂಡ ಕನ್ನಡ ನಾಡಿನ ಶೌರ್ಯ ಧೈರ್ಯ ಸಾಹಸ ಸಂಪತ್ತುಗಳ ಚಿತ್ರವೇ ಕನ್ನಡ ಭಾರತದಲ್ಲಿ ಮೂಡಿ ಬಂದಿದೆಯೆನ್ನಬಹುದು.

ಪಂಪ, ಹರಿಹರ, ನಾರಣಪ್ಪ — ಈ ಮೂವರೂ ಕನ್ನಡದ ವರ ಕವಿಗಳು. ಈ ಮೂವರೂ ಪ್ರಪಂಚದ ಮಹಾಕವಿಗಳೊಡನೆ ಸರಿಸಮಾನವಾಗಿ ಗೌರವಕ್ಕೆ ಅರ್ಹರಾಗಿರುವರು.

———:———

# ನಿಶ್ಶಂಕೆಯ ಕಥೆ

ಅತಿಶಯ ಜಿನೇಂದ್ರ ವಚನಾ
ಮೃತಮಂ ಸಕಲೈಕ ಜೀವ ಹಿತನುಂ ಪುಣ್ಯೋ
ದಿತಮಂ ಭವ್ಯನಿಕಾಯ
ಸ್ತುತಮಂ ನೆರೆ ಪೇಳ್ವೆನರಿಯೆ ಧರ್ಮಾಮೃತಮಂ
ಜಿನಮತದೊಳೆನಿತು ಸಾರಮ
ದನಿತುಂ ಲೇಸಾಗಿ ತೋರ್ಪುದೀ ಕೃತಿಯೊಳ್

[ ಜಿನೇಂದ್ರನ ವಚನಾಮೃತವು ಅತಿಶಯವಾದ್ದು ; ಸಕಲ ಜೀವಗಳಿಗೂ ಹಿತವನ್ನುಂಟುಮಾಡುವಂಥದು ; ಪುಣ್ಯದಿಂದ ದೊರಕುವಂಥದು ; ಭವ್ಯನಮೂಹವು ಸ್ತುತಿಸಿರುವಂಥದು. ಅಂಥ ಜಿನ ವಚನ ರೂಪವಾದ ಧರ್ಮವೆಂಬ ಅಮೃತವನ್ನು 'ಧರ್ಮಾಮೃತವೆಂಬ ಈ ಗ್ರಂಥದಲ್ಲಿ ಚೆನ್ನಾಗಿ ತಿಳಿಯುವಂತೆ ವಿವರಿಸುತ್ತೇನೆ.

ಜಿನ ಮತದಲ್ಲಿ ಸಾರ ಎಷ್ಟಿದೆಯೊ ಅಷ್ಟೂ ಈ ಗ್ರಂಥದಲ್ಲಿ ತೋರಿ ಬರುತ್ತದೆ. ]

## ಲಲಿತಾಂಗ

ಕಾಶ್ಮೀರ ದೇಶದಲ್ಲಿ ವಿಜಯಪುರವೆಂಬ ಒಂದು ಪಟ್ಟಣ. ಅದನ್ನಾಳುವವನು ಅರಿಮಥನನೆಂಬ ಅರಸ. ಸೌಂದರಿಯೆಂಬವಳು ಅವನ ಪಟ್ಟದರಸಿ. ಅವರಿಗೆ ಲಲಿತಾಂಗನೆಂಬ ಮಗ ಹುಟ್ಟಿದನು.

ಲಲಿತಾಂಗ ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತಿದ್ದನು. ತಾಯಿ ತಂದೆಗಳಿಗೆ ಮಗನ ಮೇಲೆ ಮೋಹ ಅತಿಯಾಯಿತು. ಅವನು ಕೆಟ್ಟದ್ದು ಮಾಡಿದರೆ ಕೈಯೆತ್ತಿ ಹೊಡೆಯುತ್ತಿರಲಿಲ್ಲ ; 'ಅಪ್ಪಾ, ದುರ್ಜನರ ಜೊತೆ ಹೋಗಬಾರದು' ಎಂದು ಮುನಿದು ಮೃದುವಾಗಿ ಬಯ್ಯುತ್ತಲೂ ಇರಲಿಲ್ಲ. ಮಗ ತಾನೂ ತನ್ನ ಗೆಳೆಯರೂ ಕೂಡಿ ಪುರಜನರನ್ನೂ ಪರಿಜನರನ್ನೂ ಹಿಡಿದು ಅವಮಾನಿಸಿ ಬಡಿದರೆ, ಅರಸನೂ ಅರಸಿಯೂ

ಅಕ್ಕರೆಯಿಂದ ನೋಡಿ ನಗುವರು. ಹೀಗಾಗಿ ಲಲಿತಾಂಗನು ಅಂಕುಶ ವಿಲ್ಲದ ಮದದಾನೆಯಂತಾದನು; ಬೇವನ್ನು ಸೇರಿದ ನೀರು ಕಹಿಯಾಗು ವಂತೆ ದುರ್ಜನರ ಸಂಗದಿಂದ ಅವನು ದುಷ್ಟನಾಗಿ ಸೊಕ್ಕಿದನು.

ಅವನಿಗೆ ಯೌವನವೊದಗಿತು ದರ್ಪ, ಸೊಕ್ಕು, ಬಲ ಇವುಗಳ ಜೊತೆಗೆ ಯೌವನವೂ ಸೇರಲು ಅವನ ಕೆಟ್ಟತನಕ್ಕೆ ಕಟ್ಟಿಲ್ಲವಾಯಿತು. ಅವನು ಯಾರನ್ನೂ ಬಿಡದೆ ಎಲ್ಲರನ್ನೂ ತವುಡಿಗೂ ಆಗದಂತೆ ಕಂಡು ಬಯ್ಯುವನು; ಹೊಯ್ಯುವನು. ಊರಿನ ತಿರುಕರನ್ನೆಲ್ಲ ಅಟ್ಟಿ ಹಿಡಿತರಿಸಿ ಸುಂಕ ಕೊಡಿರೆಂದು ಕಾಡುವನು. ಎಣ್ಣೆಯವರ ಕೇರಿಯನ್ನು ಸೂರೆ ಮಾಡಿ ದೇವಸ್ಥಾನದಲ್ಲಿ ದೀಪ ಹೊತ್ತಿಸುವನು. ಹೂವಿನ ಸಂತೆಯನ್ನು ಹೊಕ್ಕು ಮಾಲೆಗಾರರು ದಿಕ್ಕುಗೆಟ್ಟೋಡಲು ಮಾಲೆಗಳನ್ನು ತಾನೂ ತನ್ನ ಪರಿವಾರದ ಧೂರ್ತರೂ ಮುಡಿದು ವಿನೋದದಿಂದ ನಗುವರು. ಕಂಚು ಗಾರರು, ಮಣಿಗಾರರು, ಬಟ್ಟೆಯವರು ಮೊದಲಾದವರ ಅಂಗಡಿಗಳಿಗೆ ನುಗ್ಗಿ ಕಣ್ಣಿಗೆ ಬೇಕಾದ ವಸ್ತುಗಳನ್ನೆಲ್ಲ ಕಿತ್ತುಕೊಂಡು ತನ್ನ ಪರಿವಾರ ದವರಿಗೆ ಸಂಬಳವೆಂದು ಹಂಚುವನು. ಧನಿಕರ, ಲೋಭಿಗಳ ಹೊನ್ನನ್ನು ಒಂದುಳಿಯದಂತೆ ಕವರಿಕೊಂಡು ಸಿಕ್ಕಿದವರಿಗೆ ದಾನ ಮಾಡುವನು. ನಾಯಿ ಹಂದಿಗಳನ್ನೂ ಗಂಡು ಹೆಣ್ಣುಗಳನ್ನೂ ಬಲಾತ್ಕಾರದಿಂದ ಎಳ ತರಿಸಿ, ಕಂಡವರೆದೆ ನಡುಗುವಂತೆ ಅವರನ್ನು ಹೋರಿಸುವನು. ಅವನ ಈ ರೀತಿಯ ಹಲವು ಕಾಟಗಳಿಂದ ಹೊಳಲೆಲ್ಲ ಅಲ್ಲೋಲಕಲ್ಲೋಲ ವಾಯಿತು. ಜನಕ್ಕೆ ಕನಸಿನಲ್ಲೂ ಲಲಿತಾಂಗನ ಭಯವೆ ಹೆಚ್ಚಾಯಿತು.

ಆಗ ಎಲ್ಲರೂ ನೆರೆದು ಒಂದಾಗಿ ಅರಮನೆಯ ಬಾಗಿಲಿಗೆ ಬಂದು ಹುಯ್ಯಲಿಟ್ಟರು. ಓಲಗದಲ್ಲಿದ್ದ ಅರಿಮಥನ ಮಹಾರಾಜನು ಅವರನ್ನು ಬರಹೇಳಿ ಹುಯ್ಯಲಿದೇನೆಂದು ಕೇಳಿದನು. ಅವರು ಅದಕ್ಕೆ "ದೇವಾ, ನಿಮ್ಮ ಕುಮಾರನು ಆಡುವ ಆಟಕ್ಕೂ ಮಾಡುವ ಮಾಟಕ್ಕೂ ನಾವು ನಿಲ್ಲಲಾರೆವು; ತಾಳಲಾರೆವು" ಎಂದು ಅವನ ದುಷ್ಟತನವನ್ನೆಲ್ಲ ವಿವರಿ ಸಿದರು. "ನಮಗೆ ಏನಪ್ಪಣೆ?" ಎಂದು ಬೆಸಗೊಂಡರು. ಕೇಳಿ ಮಹಾ ರಾಜನು, "ನನಗೆ ಇದು ಗೊತ್ತಿರಲಿಲ್ಲ. ನೀವು ಅಂಜಬೇಡಿ" ಎಂದು

ನುಡಿದು, ಹಿರಿಯರು ಕಿರಿಯರೆನ್ನದೆ ಎಲ್ಲರನ್ನೂ ಮನ್ನಿಸಿ ವೀಳೆಯ ಕೊಟ್ಟು ಕಳಿಸಿದನು.

ಬಳಿಕ, "ಮಗ ಓದಹೋದರೆ ಬಳಲುವನೆಂದೆಣಿಸಿ ಓದಿಸದೆ ಹೋದೆ. ಅವನು ದುಷ್ಟರೊಡನೆ ಸೇರಿ ಕೆಟ್ಟನು. ನಾನೆ ಕೆಡಿಸಿದಂತಾಯಿತು" ಎಂದು ಚಿಂತಿಸಿದನು. ಮಗನನ್ನು ಕರಸಿಕೊಂಡು ರಾಜನ ಕರ್ತವ್ಯ ಗಳೇನೆಂದು ವಿವರಿಸಿ ಬುದ್ಧಿ ಹೇಳಿದನು. "ಹೋದದ್ದು ಹೋಗಲಿ. ಇನ್ನು ಮುಂದೆ ಹೀಗೆ ಮಾಡಬೇಡ. ಇಂದು ಮೊದಲಾಗಿ ನೀನು ಪೊಳಲಿನಲ್ಲಿ ಸೊಕ್ಕಿನಿಂದ ಏನಾದರೂ ಬಾಧೆಯುಂಟುಮಾಡಿದರೆ ಆಗ ನೀನು ನನ್ನ ಮಗನಲ್ಲ. ನಾನು ಮುನಿಯುತ್ತೇನೆ" ಎಂದು ಬುದ್ಧಿ ಹೇಳಿ ಎಚ್ಚರಿಸಿದನು.

ಆರು ತಿಂಗಳವರೆಗೆ ಹುರಿಬಿಗಿದು ಕಂಬಿ ಕಟ್ಟಿದ್ದರೂ ಬಿಟ್ಟ ಕೂಡಲೆ ಮತ್ತೆ ಡೊಂಕೇ ಆಗುವ ನಾಯ ಬಾಲದ ಹಾಗಾಯಿತು ಅವನ ನಡತೆ. ತಂದೆಯ ಮಾತಿಗೆ ಸ್ವಲ್ಪವೂ ಮನ್ನಣೆದೋರದೆ ಅವನು ಮೊದಲಿ ಗಿಂತಲೂ ಹೆಚ್ಚಾಗಿ ಪೊಳಲನ್ನು ಕಾಡಿ ಅಳಲಿಸತೊಡಗಿದನು. ಅದನ್ನು ಕಂಡು ದೊರೆ ಕೋಪಗೊಂಡು ಲಲಿತಾಂಗನನ್ನು ಕರಸಿ, "ಮಗನೇ, ಮೋಹ ದಿಂದ ನಿನ್ನ ಹಲವು ಕೆಟ್ಟತನಗಳನ್ನು ಇದುವರೆಗೂ ಸೈರಿಸಿದ್ದೆ. ಈಗ ನೀನು ಮೊದಲಿಗಿಂತ ಹೆಚ್ಚು ಕೇಡಿಗನಾದೆಯಲ್ಲ! ಉಳಿದ ಮಕ್ಕಳನ್ನು ಉಪೇಕ್ಷಿಸಿ ನಿನಗೇ ರಾಜ್ಯವನ್ನು ಕೊಡಬೇಕೆಂದಿದ್ದೆ ನಾನು. ನೀನು ಹೀಗೆ ಸಂತಾಪವುಂಟುಮಾಡಿದೆ. ಇನ್ನು ನನ್ನ ಮೇಲೆ ತಪ್ಪಿಲ್ಲ. ಲೇಸೆಂದು ಓಪನ್ನು ಹಿಡಿದರೆ ಕೈ ಮುಸಿಯಾಗುವ ಹಾಗೆ ನಿನ್ನಂಥ ದುಷ್ಟ ನನ್ನು ಒಳಕೊಂಡಿದ್ದರೆ ನನ್ನ ಕೀರ್ತಿ ಕೆಡುವುದು; ಸದ್ಗತಿ ಹಾಳಾಗು ವುದು. ಇನ್ನುಮೇಲೆ ನಾನಾಳುವ ರಾಜ್ಯದಲ್ಲಿರಬೇಡ. ಹೊರಟುಹೋಗು" ಎಂದು ಗದರಿಸಿ ನುಡಿದನು.

ಲಲಿತಾಂಗ ತಾಯಿಯ ಬಳಿ ಬಂದು ತನ್ನ ದೇಶತ್ಯಾಗದ ಸುದ್ದಿ ಯನ್ನು ತಿಳಿಸಿದನು. ಆಕೆ, "ಕಂದಾ, ಕೆಟ್ಟತನವನ್ನು ಬಿಟ್ಟುಬಿಡು ವಂತೆ ಮಹಾರಾಜರು ನಿನ್ನನ್ನು ಕೈಮುಗಿದು ಕೇಳಿಕೊಳ್ಳಲಿಲ್ಲವೇ?

ಹಲವು ಸಲ ಮನ್ನಿಸಿವರಲ್ಲ! ನೀನು ಕೆಟ್ಟವರ ಕೆಳೆಯನ್ನು ಬಿಡದಿದ್ದರೆ ಅವರೇನು ಮಾಡಿಯಾರು? ಈಗಲಾದರೂ ದುರ್ಗುಣವನ್ನು ಬಿಡು, ಮಗನೇ. ನಿಮ್ಮಯ್ಯ ಮುನಿದು ನಿನ್ನನ್ನು ತೊರೆದೇ ಬಿಡುವರೆಂದು ತಿಳಿದೆಯಾ? ನೀರು ಎಷ್ಟು ಕಾದರೂ ಮನೆಯನ್ನು ಸುಟ್ಟೀತೆ? ನಿನ್ನ ನಡತೆಯನ್ನು ತಿದ್ದಿಕೊ" ಎಂದು ತಾನೂ ಬುದ್ಧಿ ಹೇಳಿದಳು. ಲಲಿತಾಂಗನು ಅದೊಂದನ್ನೂ ಕೇಳದಿರಲು ಬೇಸತ್ತು, "ಕಾಗೆಯು ಮರಿಯೆಂದರಿಯದೆ ಕೋಗಿಲೆ ಪ್ರೀತಿಯಿಂದ ಸಾಕುತ್ತಿದ್ದರೂ ಅದು 'ಕಾ! ಕಾ' ಎಂದು ಕೂಗಿತು; ಕಾಗೆಗಳ ಜೊತೆಗೋಡಿತು—ಎಂಬಂತಾದೆ ನೀನು. ನಿನ್ನ ಕೇಡಿಗೆ ಅಳಬಾರದು" ಎಂದು ಅವನನ್ನು ಕೈಬಿಟ್ಟಳು. ಆಗ ಅವನು ವಿಜಯಪುರವನ್ನು ಬಿಟ್ಟು ನೇಪಾಳ ದೇಶಕ್ಕೆ ಹೊರಟುಹೋದನು.

ಅಲ್ಲಿ ಹೋಗಿ ಒಂದು ಕಳ್ಳರ ಪಡೆಯಲ್ಲಿ ಸೇರಿಕೊಂಡನು. ಆ ಕಳ್ಳರೊಡನಾಡುತ್ತಿರಲು, 'ಮೊದಲು ಬಂದ ಕಿವಿಗಿಂತ ಬಳಿಕ ಬಂದ ಕೋಡು ಹರಿತ' ಎಂಬಂತೆ ಅವರನ್ನೆಲ್ಲ ಮೀರಿಸಿದನು. ಅವರಿಂದ ಅಂಜನ ಘುಟಿಕೆಯ ಉಪದೇಶ ಪಡೆದು ಸಾಧಿಸಿದನು. ಅದರ ಬಲದಿಂದ ಅದೃಶ್ಯನಾಗಿ ಕದಿಯುತ್ತ ಬಂದನು. ಅವನಿಗೆ ಅಂಜನಚೋರನೆಂಬ ಹೆಸರು ಪ್ರಸಿದ್ಧವಾಯಿತು. ಕಳವು, ಜೂಜು, ಮದ್ಯ, ಮಾಂಸ ಮೊದಲಾದವುಗಳಲ್ಲಿ ಅತ್ಯಾಸಕ್ತನಾಗಿ ಮನಬಂದಂತೆ ಮಾಡುತ್ತ ಅವನು ದೇಶದೇಶ ಸುತ್ತುತ್ತಿದ್ದನು.

ಒಮ್ಮೆ ರಾಜಗೃಹವೆಂಬ ಪಟ್ಟಣಕ್ಕೆ ಹೋಗಿದ್ದನು. ಅಲ್ಲಿ ಅನಂಗಸುಂದರಿಯೆಂಬೊಬ್ಬ ಸೂಳೆಯನ್ನು ಕಂಡು ಅವಳಲ್ಲಿ ಮೋಹಗೊಂಡನು. ಅವಳ ಸ್ನೇಹವನ್ನು ಸಂಪಾದಿಸಿ ಅವಳು ಕೇಳಿದ್ದನ್ನೆಲ್ಲ ತಂದುಕೊಡುತ್ತ ನಿಕ್ಷೇಪದ ಹೊನ್ನನ್ನು ಕಾಯುವ ಸರ್ಪದ ಹಾಗೆ ಅವಳನ್ನು ಬಿಟ್ಟಗಲಲಾರದೆ ಇದ್ದನು. ಅವಳು ಕೂಡ ಮನೆ ಮಠವೊಂದೂ ಇಲ್ಲದಿದ್ದರೂ ಎಷ್ಟು ಕೇಳಿದರೆ ಅಷ್ಟನ್ನೂ ಅಳುಕದೆ ತಂದುಕೊಡುವ ಅವನ ಶಕ್ತಿಗೆ ಬೆರಗಾದಳು. ಮೆಲ್ಲನೆ ಅವನಿಂದ ಗುಟ್ಟನ್ನು ಹೊರಡಿಸಿ ತಿಳಿದುಕೊಂಡಳು.

ಮರುದಿನ ಅಲ್ಲಿನ ದೊರೆ ಅರಸಿಯೊಡನೆ ಜಲಕ್ರೀಡೆಗಾಗಿ ಹೊರಟು ಪಟ್ಟಣದ ಬೀದಿಯಲ್ಲಿ ಪರಿವಾರದೊಡನೆ ಹೋಗುತ್ತಿದ್ದನು. ಪಟ್ಟದ ಮಹಾ

ದೇವಿಯ ಎದೆಯ ಮೇಲೆ 'ಜ್ಯೋತಿಪ್ರಭ' ವೆಂಬ ಒಂದು ಪದಕ ಸೂರ್ಯ ನಂತೆ ಕಾಂತಿಯುಕ್ತವಾಗಿ ಹೊಳೆಯುತ್ತಿತ್ತು. ಅದನ್ನು ಕಂಡು ಅನಂಗ ಸುಂದರಿ ಆಸೆಪಟ್ಟು ಅದನ್ನು ತಂದುಕೊಡಬೇಕೆಂದು ಲಲ್ಲೆಮಾಡಿ ಅಂಜನ ಚೋರನನ್ನು ಪ್ರಾರ್ಥಿಸಿದಳು. ಅವನು, "ಅದೊಂದನ್ನು ಬಿಟ್ಟು ಬೇರೆ ಏನನ್ನಾದರೂ ಕೇಳು, ತರುತ್ತೇನೆ. ಅದು ಬೇಡ. ಅದನ್ನು ತಂದರೆ, ಸದಾ ಅದನ್ನು ತೊಟ್ಟೇ ಇರಬೇಕು. ದೊರೆ ಕಂಡರೆ ಕೊಲ್ಲಿಸುತ್ತಾನೆ. ಆದರ ಹಂಬಲನ್ನು ಬಿಡು" ಎಂದು ನಯದಿಂದ ಒಡಂಬಡಿಸಹೋದನು.

ಸೂಳೆ ಕೇಳಲಿಲ್ಲ. ತಂದುಕೊಟ್ಟೇ ತೀರಬೇಕೆಂದು ಹಟ ಹಿಡಿದಳು. ಮುನಿದು ಹಾಸಿಗೆಯಿಂದ ಕೆಳಕ್ಕುರುಳಿ ಬೀಳುವಂತೆ ಅವನನ್ನೊದೆದು, "ಪರದೇಶಿಯಾಗಿ ಬಂದ ನಿನ್ನಲ್ಲಿ ಒಂದೇ ಮನಸ್ಸಿನಿಂದ ಸ್ನೇಹಮಾಡಿ ಆದರಿಸಿದ್ದಕ್ಕೆ ನನಗೆ ಸಂತೋಷವುಂಟು ಮಾಡಿದೆ!" ಎಂದು ಚುಚ್ಚಿ ನುಡಿ ದಳು. ಅವಳ ಪ್ರೇಮವನ್ನು ಉಳಿಸಿಕೊಳ್ಳುವುದಕ್ಕಾಗಿ, "ಅದನ್ನು ನಿನಗೆ ತಂದುಕೊಡುತ್ತೇನೆ. ಅಂಜಬೇಡ" ಎಂದು ನಂಬುಗೆ ಹೇಳಿ ಸಮಾಧಾನ ಗೊಳಿಸಿದನು.

ಬಳಿಕ, 'ಕಳ್ಳನಿಗೆ ಬೆಳುದಿಂಗಳು ಸೊಗಸದು' ಎಂಬಂತೆ ಶುಕ್ಲಪಕ್ಷ ಹೋಗುವವರೆಗೂ ಕಾದಿದ್ದು, ಕೃಷ್ಣಪಕ್ಷದ ಅಷ್ಟಮಿಯ ದಿನ ಲಲಿತಾಂಗನು ಕಣ್ಣಿಗೆ ಅಂಜನ ಎಚ್ಚಿಕೊಂಡು ಅರಮನೆಯತ್ತ ನಡೆದನು. ಅದೃಶ್ಯನಾಗಿ ಒಳಹೊಕ್ಕು ಪದಕವನ್ನು ತೆಗೆದುಕೊಂಡು ಹೊರಬಿದ್ದನು. ಓಗ್ಗಿನಿಂದ ಮೈ ಮರೆತು ಬರುತ್ತಿರಲು ರತ್ನದ ಬೆಳಕು ಸುತ್ತಲೂ ಹರಡಿತು. ಬರಿಯ ಬೆಳಕು ನಡೆದು ಹೋಗುತ್ತಿರುವುದನ್ನು ಅಲ್ಲಿಯ ತಳಾರನು ಕಂಡು ಕಳ್ಳ ನೆಂದರಿತು ಅವನ ಅಂಜನ ವಿದ್ಯೆಯನ್ನು ಕೆಡಿಸಿ ಬೆನ್ನಟ್ಟಿ ಬಂದನು.

ಅಂಜನಚೋರನು ಭಯದಿಂದ ಪದಕವನ್ನೆಸೆದು ಕೋಟೆಯನ್ನು ವಿದ್ಯಾಧರ ಕರಣದಿಂದ ದಾಟಿ, ದೆಸೆಗೆಟ್ಟೋಡುತ್ತ ಶ್ಮಶಾನದಲ್ಲಿ ಒಂದಾಲದ ಮರದ ಕೆಳಗೆ ಉರಿಯುವ ದೀಪವನ್ನು ಕಂಡು ಅಲ್ಲಿ ಬಂದನು. ಬಂದು ನೋಡಿದರೆ, ಮೇಲೆ ಮರದ ಕೊಂಬೆಯಲ್ಲಿ ನೂರೊಂದು ಕಾಲಿನ ಒಂದು ನೆಲುವನ್ನು ಕಟ್ಟಿದೆ; ಕೆಳಗೆ ಬಗೆಬಗೆಯ ಮೂವತ್ತೆರಡು ಆಯುಧಗಳನ್ನು ನೆಟ್ಟಿದೆ; ಒಬ್ಬ ಮನುಷ್ಯ ಅವನ್ನು ಪೂಜಿಸಿ ನೆಲುವಿನ ಮೇಲೆ ಹತ್ತಿ,

ಅದನ್ನು ಕೊಯ್ಯಲಾರದೆ ಇಳಿಯುತ್ತಲೂ ಹತ್ತುತ್ತಲೂ ಇದ್ದಾನೆ. ಈ ವಿಚಿತ್ರವನ್ನು ಕಂಡು ಅಂಜನಚೋರನು ಆ ಮನುಷ್ಯನನ್ನು, "ನೀನು ಯಾರು? ನೀನು ಸಾಧಿಸುವ ಈ ವಿದ್ಯೆಯ ಹೆಸರೇನು? ಯಾರು ಉಪದೇಶ ಮಾಡಿದರು? ಹೇಳು. ಹೇಳದಿದ್ದರೆ ನಿನ್ನನ್ನು ಕೊಂದು ಹಾಕುತ್ತೇನೆ'' ಎಂದು ಸುರಗಿಯನ್ನು ಹಿರಿದು ಅವನ ಗಂಟಲಿಗೆ ಒಡ್ಡಿದನು.

ಆತ ಭಯಪಟ್ಟು "ನನ್ನ ಹೆಸರು ವರಸೇನ. ಈ ವಿದ್ಯೆಗೆ ಗಗನಗಾಮಿನಿಯೆಂದು ಹೆಸರು. ಜಿನದತ್ತಸೆಟ್ಟಿ ಇದನ್ನು ನನಗೆ ಉಪದೇಶ ಮಾಡಿದನು" ಎಂದು ತಿಳಿಸಿದನು. ಲಲಿತಾಂಗನು, "ಜಿನದತ್ತಸೆಟ್ಟಿ ದಯಾನಿಧಿ, ನಿರ್ಮಲಚರಿತ್ರ. ಆತನು ಉಪದೇಶಿಸಿದ ಮೇಲೆ ನಿನಗೇಕೆ ಈ ಹೇಡಿತನ? ನಾನಾಗಿದ್ದರೆ, ನೆಲುವಿನ ಕಾಲುಗಳನ್ನೆಲ್ಲ ಒಟ್ಟಿಗೆ ಕೊಯ್ದು ಬಿಡುತ್ತಿದ್ದೆ. ನೀನು ಹೀಗೆ ಇಳಿಯುತ್ತಲೂ ಹತ್ತುತ್ತಲೂ ಇರುವುದೇಕೆ?" ಎಂದನು.

"ಮನುಷ್ಯರ ಮನಸ್ಸನ್ನು ಹೇಗೆ ತಿಳಿಯುವುದು? ಹಿಂದು ಮುಂದು ಯೋಚಿಸದೆ ದಡ್ಡತನದಿಂದ ನಾನಿದನ್ನು ಕೊಯ್ದು ಸತ್ತರೆ, ಕನಸಿನ ಬತ್ತಕ್ಕೆ ಎಚ್ಚತ್ತು ಗೋಣಿ ಹಿಡಿದ ಹಾಗಾಗುತ್ತದೆ. ಸತ್ತು ಸಿಕ್ಕುವ ಸ್ವರ್ಗಕ್ಕಿಂತ ಬದುಕಿ ಸಿಕ್ಕುವ ನರಕವೇ ಲೇಸು. ನಾನು ಸಾಯಲೊಲ್ಲೆ" ಎಂದು ವರಸೇನ ಉತ್ತರ ಕೊಟ್ಟನು.

"ಜಿನದತ್ತನು ಉತ್ತಮ, ಜಿನಭಕ್ತ; ಸರ್ವಜೀವ ಹಿತಸಾಧಕ; ವಾತ್ಸಲ್ಯ ರತ್ನಾಕರ. ಒಂದು ಇರುವೆಯ ಪ್ರಾಣಕ್ಕೂ ತಪ್ಪದವನು ನಿನಗೆ ತಪ್ಪುವನೆ?'' ಎಂದು ನುಡಿದು ಲಲಿತಾಂಗ ತಳಾರನ ಕೈಗೆ ಸಿಕ್ಕಿ ಸಾಯುವುದಕ್ಕಿಂತ ಈ ಆಯುಧಗಳ ಮೇಲೆ ಬೀಳುವುದೆ ಮೇಲೆಂದು ನಿಶ್ಚಯಿಸಿದನು. ಬಳಿಕ, "ಕೊಡು ನನಗೆ ಆ ಮಂತ್ರವನ್ನು. ಬೇಗ ಕೊಡದಿದ್ದರೆ ನಿನ್ನನ್ನು ದಿಕ್ಕುಗಳಿಗೆ ಬಲಿಹಾಕಿ ಬಿಡುತ್ತೇನೆ" ಎಂದು ಗರ್ಜಿಸಿದನು. ವರಸೇನ ಬೆಚ್ಚಿ ಜಿನದತ್ತಸೆಟ್ಟಿ ತನಗೆ ಹೇಗೆ ಹೇಳಿದ್ದನೊ ಹಾಗೆ ಅವನಿಗೆ ಮಂತ್ರವನ್ನು ಉಪದೇಶ ಮಾಡಿದನು.

ಲಲಿತಾಂಗನು ನಿಶ್ಶಂಕೆಯಿಂದ ನಂಬಿ ಆ ಮಂತ್ರವನ್ನು ಗ್ರಹಿಸಿದನು. ಜಿನಪಾದಪದ್ಮ ಸ್ಮರಣೆಮಾಡಿ ಜಿನದತ್ತಸೆಟ್ಟಿಗೆ ಕೈಮುಗಿದು ನೆಲುವಿನ ನೂರು ಕಾಲುಗಳನ್ನೂ ಚಿಕ್ಕನೆ ಕತ್ತರಿಸಿದನು. ಕೆಳಗೆ ಬೀಳುತ್ತ ಆಯುಧಗಳ ತುದಿ ಮುಟ್ಟುವ ಹಾಗೆ ಬರುವಷ್ಟರಲ್ಲಿ ಮುಟ್ಟದೆ ಮೇಲಕ್ಕೆ ನೆಗೆದನು. ವಿದ್ಯಾದೇವತೆ ಬಂದು ಕೈ ಮುಗಿದು, "ಏನಪ್ಪಣೆ" ಎಂದು ಬೆಸಗೊಂಡಿತು. ಅವನು, "ಜಿನದತ್ತಸೆಟ್ಟಿಯ ಬಳಿಗೆ ಕರೆದುಕೊಂಡು ಹೋಗು" ಎಂದನು. ಹಾಗೆಯೆ ಆಗಲೆಂದು ಆ ವಿದ್ಯಾದೇವತೆ ಮೇರು ಪರ್ವತಕ್ಕೆ ಅವನನ್ನು ಕೊಂಡೊಯ್ದು ಅಲ್ಲಿ ಬಂದಿದ್ದ ಜಿನದತ್ತನನ್ನು ತೋರಿಸಿ ಕೆಳಗಿಳಿಸಿತು.

ಇಳಿದ ಕೂಡಲೆ ಅವನು ಜಿನದತ್ತನ ಬಳಿಗೆ ಹೋಗಿ ಅವನ ಕಾಲಿಗೆ ತಲೆ ಮುಟ್ಟಿಸಿ ನಮಸ್ಕಾರ ಮಾಡಿದನು. ಅಂಜನಚೋರ ಅಲ್ಲಿ ಬಂದದ್ದನ್ನು ಕಂಡು ಸೆಟ್ಟಿಗೆ ಬೆರಗಾಯಿತು. ಕಳ್ಳನಿಗೆ ಈ ವಿದ್ಯೆ ದೊರಕಿದ್ದು ಸುಮ್ಮನೆ ಕುಣಿಯುವವನಿಗೆ ಹರೆಯುವನೂ ಕೂಡಿದಂತಾಯಿತು. ಅಂಜನಘುಟಿಕೆಯ ಜೊತೆಗೆ ಗಗನಗಾಮಿನೀ ವಿದ್ಯೆಯೂ ಬರಲು, ಇವನಿನ್ನು ನಾಡನ್ನೆಲ್ಲ ನಿವಾಳಿ ತೆಗೆದಂತೆ ಕದಿಯುದಿರನು." ಎಂದು ಅಂಜಿ, "ನಿನಗೆ ಈ ವಿದ್ಯೆ ಹೇಗೆ ಬಂತು?" ಎಂದು ಕೇಳಿದನು.

ಅಂಜನಚೋರನು ಅದರ ಕಥೆಯನ್ನೆಲ್ಲ ಹೇಳಿ, "ಜಿನದತ್ತಾ, ನಿಮ್ಮ ಮಾತನ್ನು ಸಂದೇಹಪಡದೆ ನಂಬಿದ್ದರಿಂದ ಬರುವ ಫಲವನ್ನು ಮನವಾರ ಕಂಡೆ. ಇನ್ನು ಮುಂದೆ ಜಿನರ ಮತ್ತು ನಿಮ್ಮ ಪಾದಗಳೇ ನನಗೆ ಶರಣು" ಎಂದು ನುಡಿದು, ಅದುವರೆಗೆ ದುರ್ಮಾರ್ಗದಲ್ಲಿ ನಡೆದು ಬಾಳನ್ನು ಹಾಳು ಮಾಡಿಕೊಂಡದ್ದಕ್ಕಾಗಿ ತನ್ನನ್ನು ಪರಿಪರಿಯಲ್ಲಿ ಹಳಿದುಕೊಂಡನು. ಬಳಿಕ, "ನೀವು ಅರ್ಹನನ್ನಲ್ಲದೆ ಬೇರೆ ದೇವರನ್ನು ಕೈಕೊಳ್ಳುವವರಲ್ಲ. ಪಂಚ ನಮಸ್ಕಾರವನ್ನುಳಿದು ಬೇರೆ ಮಂತ್ರವನ್ನು ನೆನೆಯುವವರಲ್ಲ. ಈ ವಿದ್ಯೆ ನಿಮಗೆ ಬಂದದ್ದು ಹೇಗೆ?" ಎಂದು ಸೆಟ್ಟಿಯನ್ನು ಕೇಳಿದನು.

ಆತನು ಆ ಸಂಗತಿಯನ್ನು ಸಂಕ್ಷೇಪವಾಗಿ ಹೇಳತೊಡಗಿದನು:

## ಧನ್ವಂತರಿ, ವಿಶ್ವಾನುಲೋಮ

ಜನಪದವೆಂಬ ನಾಡಿನಲ್ಲಿ ಸೌಂದರನೆಂಬ ರಾಜಶ್ರೇಷ್ಠಿಗೆ ಧನ್ವಂತರಿಯೆಂಬ ಮಗನಿದ್ದನು. ರಾಜಪುರೋಹಿತನಾದ ಸೋಮಶರ್ಮನೆಂಬ ಬ್ರಾಹ್ಮಣನಿಗೆ ವಿಶ್ವಾನುಲೋಮನೆಂಬ ಮಗನಿದ್ದನು. ಇವರಿಬ್ಬರಿಗೂ ಸ್ನೇಹ ಹಿರಿದಾಗಲು ಹಾಲು ನೀರುಗಳಂತೆ ಹೊಂದಿಕೊಂಡಿದ್ದರು.

ಇಬ್ಬರೂ ದುರ್ಜನರ ಸಹವಾಸದಿಂದ ಕೆಟ್ಟುಹೋದರು. ಸೌಂದರ ಸೆಟ್ಟಿಯೂ ಸೋಮಶರ್ಮನೂ ಏನೇನು ಮಾಡಿದರೂ ಅವರ ದುಷ್ಟತನವನ್ನು ತಿದ್ದಲಾಗಲಿಲ್ಲ. ಕಡೆಗೆ ಇಬ್ಬರೂ ಮಕ್ಕಳನ್ನು ತೊರೆದುಬಿಟ್ಟರು. ಆ ದುಷ್ಟರು ತಂದೆ ತಾಯಿಗಳನ್ನು ಅಗಲಿ ಹೋಗಿ ಬೇರೆ ಇದ್ದರು.

ಒಂದು ಸಲ ಅವರಿಬ್ಬರೂ ಅರಮನೆಗೆ ನುಗ್ಗಿ ದಿವ್ಯ ರತ್ನಗಳನ್ನು ಕದ್ದು ಹೊರಬರುತ್ತಿರುವಾಗ ತಳಾರನು ಅವರನ್ನು ಹಿಡಿದು ಅರಸನಿಗೆ ಒಪ್ಪಿಸಿದನು. ಆತ ಅವರನ್ನು ಕೊಲ್ಲಿಸದೆ ದೇಶಬಿಟ್ಟೋಡಿಸಿದನು. ತಮ್ಮ ಹೆಂಡತಿಯರನ್ನೂ ತಾಯಿಯರನ್ನೂ ಜೊತೆಯಲ್ಲಿ ಕರೆದುಕೊಂಡು ಅವರು ಗಜಪುರವೆಂಬ ಬೇರೊಂದು ಪಟ್ಟಣಕ್ಕೆ ಹೋಗಿ ನೆಲಸಿದರು. ಒಬ್ಬೊಬ್ಬರೂ ಐನೂರು ಮಂದಿಗೆ ನಾಯಕರಾಗಿ ಪರದೇಶಗಳಲ್ಲಿ ಕದ್ದು ತಂದು ಭೋಗಗಳನ್ನನುಭವಿಸುತ್ತ ಸುಖವಾಗಿದ್ದರು.

ಆಗ ವಿಶ್ವಾನುಲೋಮನು ಧನ್ವಂತರಿಯನ್ನು ಕುರಿತು, "ನಾನೊಂದನ್ನು ಕೇಳಿಕೊಳ್ಳುತ್ತೇನೆ. ಇಲ್ಲೆನ್ನದೆ ಒಪ್ಪಿಕೊಳ್ಳಬೇಕಣ್ಣಾ. ಅದೇನೆಂದರೆ— ಮೊದಲಿನಂತೆ ಬಸದಿಗೆ ಹೋಗುವುದನ್ನೂ ಋಷಿಗಳೊಡನೆ ಮಾತಾಡುವುದನ್ನೂ ಬಿಡು. ಏಕೆಂದರೆ ಅದರಿಂದ ನಮ್ಮ ಭೋಗಕ್ಕೆ ಅಡ್ಡಿ" ಎಂದು ಒಡಂಬಡಿಸಿ ಪ್ರತಿಜ್ಞೆ ಮಾಡಿಸಿದನು.

ಒಂದು ದಿನ ಅವರಿಬ್ಬರೂ ಪಟ್ಟಣದಿಂದ ಹೊರಟು ಕೆರೆಗೆ ಹೋಗುತ್ತಿರುವಾಗ ಮದ್ದಾನೆಯೊಂದು ನಿರಂಕುಶವಾಗಿ ನುಗ್ಗಿಬರುತ್ತಿರಲು ಕಂಡು ಓಡತೊಡಗಿದರು. ಅತ್ತ ಇತ್ತ ಎಲ್ಲಿಯೂ ಬೇರೆ ಎಡೆಯಿಲ್ಲದ್ದರಿಂದ ಹತ್ತಿರದ ಜಿನಾಲಯಕ್ಕೆ ಹೋಗಬೇಕಾಯಿತು. ಆನೆಯ ಭಯ ಕಳೆಯುವವರೆಗೂ ಇದ್ದುಹೋಗಬೇಕೆಂದಿದ್ದರು. ಅಷ್ಟರಲ್ಲಿ ದೊಡ್ಡ ಮಳೆ ಬಂತು.

ಮಳೆ ನಿಲ್ಲುವಷ್ಟರಲ್ಲಿ ಹೊತ್ತು ಮುಳುಗಿ ಕೋಟೆಯ ಬಾಗಿಲು ಹಾಕಿತು. ಆ ಮಹಾ ಪ್ರತಿಜ್ಞರಿಬ್ಬರೂ ರಾತ್ರಿ ಅಲ್ಲಿಯೇ ತಂಗಬೇಕಾಯಿತು. ತಮ್ಮ ಪ್ರತಿಜ್ಞೆಯನ್ನು ನೆನೆದು ಕಿವಿಗೆ ಹತ್ತಿ ಗಿಡಿಗಿಕೊಂಡು ಮಲಗಿದರು.

ಆ ಬಸದಿಯಲ್ಲಿ ವರಧರ್ಮರೆಂಬ ಮುನಿಗಳು ಉಪವಾಸವಿದ್ದ ಭವ್ಯ ಜನಕ್ಕೆ ಧರ್ಮಬೋಧೆ ಮಾಡುತ್ತಿದ್ದರು. ಧನ್ವಂತರಿಗೆ ಎಚ್ಚರವಾಯಿತು. ವಿಶ್ವಾನುಲೋಮನನ್ನು ತಡವರಿಸಿ ನೋಡಿ ಅವನು ನಿದ್ದೆಯಲ್ಲಿ ಮೈಮರೆ ತಿರುವನೆಂದರಿತು ಕಿವಿಯ ಹತ್ತಿಯನ್ನು ತೆಗೆದು ಆಲಿಸಿದನು. "ಧರ್ಮವನ್ನು ಸ್ಥಿರಮನಸ್ಸಿನಿಂದ ಕೇಳಲೊಲ್ಲದವನೆ ಕಿರಿಯ, ಅರಿಯಲೊಲ್ಲದವನೆ ಬರಿಯ" ಎಂಬ ಉಪದೇಶದ ಮಾತು ಕಿವಿಗೆ ಬಿತ್ತು. ಅವನಿಗೆ ಕರ್ಮ ಸವೆಯುವ ಕಾಲ ಒದಗಿ ಬಂದಿತ್ತು. ಅವನು ಭಟ್ಟಾರಕರ ಹತ್ತಿರ ಹೋಗಿ, "ನನಗೊಂದು ವ್ರತವನ್ನು ದಯಪಾಲಿಸಿ" ಎಂದು ಬೇಡಿಕೊಂಡನು. ದಿವ್ಯ ಜ್ಞಾನಿಗಳಾದ ಭಟಾರರು ಅವನು ಸನ್ಮಾರ್ಗಕ್ಕೆ ತಿರುಗುವನೆಂದರಿತರು. "ನಿತ್ಯವೂ ತರಟು ತಲೆಯನ್ನು ಕಂಡಲ್ಲದೆ ಊಟ ಮಾಡಬೇಡ" ಎಂದರು. ಹಾಗೆ ಮಾಡುವೆನೆಂದು ಧನ್ವಂತರಿ ವ್ರತ ತೊಟ್ಟನು.

ಕೆಲವು ದಿವಸ ಕಳೆಯಿತು. ಒಂದು ದಿನ ಧನ್ವಂತರಿ ಊಟಕ್ಕೆ ಬಂದು ಕುಳಿತಾಗ ತಟಕ್ಕನೆ ವ್ರತದ ನೆನಪಾಯಿತು. ಆ ದಿನ ವ್ರತವನ್ನು ಮರೆ ತದ್ದಕ್ಕೆ ನಾಚಿ ಎದ್ದನು. ಪಕ್ಕದ ಮನೆಯ ಕುಂಬಾರ ತರಟು ತಲೆಯವನು. ಅವನನ್ನು ನೋಡಹೋದನು. ಅವನು ಮನೆಯಲ್ಲಿರಲಿಲ್ಲ. ಹುಡುಕುತ್ತ ಮಣ್ಣ ಗುಂಡಿಯ ಬಳಿ ಹೋದನು. ದೂರದಲ್ಲೆ ಅವನ ಬೋಳು ತಲೆಯನ್ನು ಕಂಡು, "ಕಂಡೆ!" ಎಂದು ಕೂಗಿ ಹಿಂದಕ್ಕೆ ಬಂದು ಊಟಮಾಡಿದನು. ಅದೇ ಹೊತ್ತಿನಲ್ಲಿ ಕುಂಬಾರನಿಗೆ ಹೂಳಿದ್ದ ನಿಧಿಯೊಂದು ಕಾಣಿಸಿತ್ತು. ಅದನ್ನೇ ಧನ್ವಂತರಿ ಕಂಡನೆಂದು ತಿಳಿದು ಕುಂಬಾರ ಭಯಪಟ್ಟು ನಡು ರಾತ್ರಿಯಲ್ಲಿ ಅದನ್ನು ತಂದೊಪ್ಪಿಸಿದನು. ಮುನಿಯ ಮಾತಿನಿಂದ ಇಷ್ಟಾಯಿತೆಂದು ನೆನೆದು ಧನ್ವಂತರಿ ಕುಂಬಾರನಿಗೆ ಸಾಕಾಗುವಷ್ಟನ್ನು ಕೊಟ್ಟು ಕಳಿಸಿ ನಿಧಿಯನ್ನು ತಾನಿಟ್ಟುಕೊಂಡನು.

ಮರುದಿನ ಬಸದಿಗೆ ಹೋಗಿ ಭಟಾರರಿಗೆ ತನ್ನ ಲಾಭವನ್ನು ತಿಳಿಸಿ ಮತ್ತೊಂದು ವ್ರತವನ್ನು ಬೇಡಿದನು. ಅವರು, "ಹೆಸರರಿಯದ ಹಣ್ಣು

ತಿನ್ನಬೇಡ" ಎಂದರು. ಧನ್ವಂತರಿ ಆಗಲೆಂದು ಅಡಿಗೆರಗಿ ಮನೆಗೆ ಬಂದನು.

ಕೆಲವು ದಿನ ಕಳೆದ ಮೇಲೆ ಅವನೂ ವಿಶ್ವಾನುಲೋಮನೂ ತಮ್ಮ ಪಡೆಯೊಡನೆ ಪರದೇಶಕ್ಕೆ ಹೋಗಿ ಕದ್ದು ಬಹು ದ್ರವ್ಯವನ್ನು ಪಡೆದು ಹಿಂದಿರುಗಿ ಬರುತ್ತ ದಾರಿಯಲ್ಲಿ ಒಂದಡವಿಯಲ್ಲಿ ಬೀಡು ಬಿಟ್ಟರು. ಬುತ್ತಿ ಮುಗಿದಿತ್ತು. ಹಸಿವು ಹೆಚ್ಚಾಯಿತು. ಅಡವಿಯ ಹಣ್ಣುಗಳನ್ನು ಹುಡುಕಿ ತನ್ನಿರೆಂದು ಆಳುಗಳನ್ನು ಕಳಿಸಿದರು. ಅವರು ಕರ್ಪೂರದ ಕಂಪೂ ಕುಂಕುಮದ ಬಣ್ಣವೂ ಕೂಡಿ ಅಂದವಾಗಿ ಕಂಡ ಕಾಂಚೀರದ ಹಣ್ಣುಗಳನ್ನು ಆಯ್ದು ತಂದು ರಾಶಿ ಹಾಕಿದರು. ಹೆಸರು ಗೊತ್ತಿಲ್ಲದ್ದರಿಂದ ಧನ್ವಂತರಿ ತಿನ್ನಲಿಲ್ಲ. ವಿಶ್ವಾನುಲೋಮನು, " ಈ ಸವಣರು ತಾವು ಉಣ್ಣದೆ ಹೋಗುವುದಲ್ಲದೆ ಉಳಿದವರನ್ನೂ ಉಣ್ಣಗೊಡುವುದಿಲ್ಲ. ಇಂಥ ಧೂರ್ತರನ್ನು ಈ ಲೋಕದಲ್ಲಿ ಕಾಣೆ. ಇವರ ಮಾತು ಯಾವ ನಿಶ್ಚಯ ? " ಎಂದು ನುಡಿದು ಒಡಂಬಡಿಸಿ ನೋಡಿದನು. ಆದರೂ ಧನ್ವಂತರಿ ಹಣ್ಣು ತಿನ್ನಲಿಲ್ಲ. ಅವನು ತಿನ್ನಲಿಲ್ಲವೆಂದು ವಿಶ್ವಾನುಲೋಮನೂ ತಿನ್ನಲಿಲ್ಲ. " ನೀವಿಬ್ಬರೂ ಸವಣ್ಣರುಳಗಳು. ಉಪವಾಸ ಸಾಯಿರಿ " ಎಂದುಕೊಂಡು ಹಸಿವು ತಡೆಯಲಾರದೆ ಭೃತ್ಯರೆಲ್ಲರೂ ಹಣ್ಣು ತಿಂದರು ತಿಂದು ಸತ್ತರು. 'ಶಂಕಿಸಿ ಬದುಕಿದೆ'ವೆಂದು ಗೆಳೆಯರಿಬ್ಬರೂ ಸಂತೋಷಪಟ್ಟರು. ಭೃತ್ಯರ ಹೊನ್ನನ್ನೆಲ್ಲ ಇಬ್ಬರೂ ಹಂಚಿಕೊಂಡು ಊರಿಗೆ ಬಂದರು.

ಧನ್ವಂತರಿ ವರಧರ್ಮ ಭಟ್ಟಾರಕರನ್ನು ಕಂಡು ನಡೆದದ್ದನ್ನು ತಿಳಿಸಿ ಮತ್ತೊಂದು ವ್ರತವನ್ನು ಬೇಡಿದನು. ಅವರು " ಹಿಟ್ಟನೆತ್ತನ್ನೂ ಬಂಡಿಯನ್ನೂ ತಿನ್ನಬೇಡ " ಎನ್ನಲು ಆ ವ್ರತವನ್ನು ಕೈಕೊಂಡನು.

ಹೀಗಿರುವಲ್ಲಿ ಮತ್ತೊಂದು ಸಲ ಕದ್ದು ಹಿಂದಿರುಗಿ ಬರುತ್ತಿರುವಾಗ ನಟ್ಟಡವಿಯಲ್ಲಿ ಹಸಿವು ನೀರಡಿಕೆಗಳಿಂದ ಕಂಗೆಟ್ಟರು. ನಾಗಾಲಯದ ಮುಂದಿನ ತಾವರೆಗೊಳಕ್ಕೆ ನೀರು ಕುಡಿಯಲು ಹೋದರು. ಅಲ್ಲಿ ಮುನ್ನಿನ ದಿನ ನಾಡವರು ಬಂದು ಹಿಟ್ಟಿನ ಎತ್ತು ಬಂಡಿಗಳನ್ನು ಪೂಜಿಸಿ ಹೋಗಿದ್ದರು. ಭೃತ್ಯರು ಅವನ್ನು ತಂದು ತೋರಿಸಿದರು. ಧನ್ವಂತರಿ ತಿನ್ನಲೊಲ್ಲದಿರಲು ವಿಶ್ವಾನುಲೋಮನೂ ಒಲ್ಲೆನೆಂದೆನು. ಉಳಿದವರೆಲ್ಲ ಸೈರಣೆಗೆಟ್ಟು ತಿಂದರು. ಹಿಂದಿನಿರುಳು ಹುತ್ತದಿಂದ ಹೊರಬಂದ ಹಾವೊಂದು ಆ ಹಿಟ್ಟಿನಲ್ಲಿ ವಿಷ

ಕಾದಿತ್ತು. ತಿಂದವರೆಲ್ಲ ಸತ್ತರು. ಕಂಡು ಅಚ್ಚರಿಪಟ್ಟು ಇಬ್ಬರೂ ಎದೆ ನೀವಿಕೊಂಡರು. ಭಟರ ಹೊನ್ನನ್ನೆಲ್ಲ ಹಂಚಿಕೊಂಡು ಊರಿಗೆ ಬಂದರು. ನಡೆದದ್ದನ್ನೆಲ್ಲ ಭಟಾರರಿಗೆ ಬಿನ್ನಯಿಸಿ, ಮತ್ತೊಂದು ವ್ರತವನ್ನು ಬೇಡಲು, "ಮಗನೇ, ಎರಡು ಪರ್ವಗಳಲ್ಲೂ ಅಷ್ಟಮಿ ಚತುರ್ದಶಿಗಳಲ್ಲೂ ಕಳ್ಳನ್ನೂ ಮಾಂಸವನ್ನೂ ಬಿಟ್ಟುಬಿಡು" ಎಂದರು. ಮುನಿಯ ಮಾತನ್ನು ನಿಶ್ಚಯವೆಂದು ನಂಬಿ ವ್ರತವನ್ನು ಕೈಕೊಂಡನು.

ಮತ್ತೊಮ್ಮೆ ಪರದೇಶದಲ್ಲಿ ಕದ್ದು ಹಿಂದಿರುಗುತ್ತ ಒಂದು ಬೆಟ್ಟದ ತಪ್ಪಲಲ್ಲಿ ಬೀಡು ಬಿಟ್ಟಿದ್ದರು. ಆಗ ವಿಶ್ವಾನುಲೋಮನು, "ಈ ಪಯಣದಲ್ಲಿ ಹಲವು ದಿನಗಳಿಂದ ಕಳ್ಳೂ ಮಾಂಸವೂ ದೊರೆತಿಲ್ಲ. ಕಳ್ಳೂ ಮಾಂಸವೂ ಇಲ್ಲವಾದರೆ ಸಂಸಾರದಿಂದೇನು ಫಲ?" ಎಂದುಕೊಂಡು ತನ್ನ ಭಟರಲ್ಲಿ ನಾಲ್ವರನ್ನು ಕರೆದು ಪಕ್ಕದ ಬೇಡರ ಹಳ್ಳಿಯಿಂದ ಕಳ್ಳು ತನ್ನಿರೆಂದು ಹೇಳಿ ಕಳಿಸಿದನು. ಧನ್ವಂತರಿಯೂ ತನ್ನ ಭಟರಲ್ಲಿ ನಾಲ್ವರನ್ನು ಮಾಂಸ ತರಲು ಕಳಿಸಿದನು.

ಕಳ್ಳು ತರುತ್ತಿದ್ದ ನಾಲ್ವರೂ, "ಈ ಕಳ್ಳಿನಲ್ಲಿ ವಿಷ ಬೆರಸಿ ಕೊಟ್ಟು ಎಲ್ಲರನ್ನೂ ಕೊಂದು ಹಾಕಿ ಎಲ್ಲರ ಹೊನ್ನನ್ನೂ ನಾವೇ ತೆಗೆದುಕೊಳ್ಳೋಣ" ಎಂದು ಆಲೋಚಿಸಿ ಕಳ್ಳಿಗೆ ವಿಷ ಬೆರಸಿ ತಂದರು. ಮಾಂಸ ತರಹೋದವರೂ ಅದೇ ಆಲೋಚನೆಯಿಂದ ಅಡಗಿನಲ್ಲಿ ವಿಷ ಬೆರೆಸಿಕೊಂಡು ಬಂದರು. ಅಂದು ಚತುರ್ದಶಿಯೆಂದರಿತು ಧನ್ವಂತರಿ ಒಲ್ಲದೆ ಹೋದನು. ಅವನೊಲ್ಲನೆಂದು ವಿಶ್ವಾನುಲೋಮನೂ ಒಲ್ಲದೆ ಬಿಟ್ಟನು. ಉಳಿದವರು ಅವರಿವರಿಗೆ ಇವರವರಿಗೆ ಉಪಚಾರ ಹೇಳುತ್ತ ಕಪಟದಿಂದ ಕಳ್ಳು ಮಾಂಸಗಳನ್ನು ಕೊಟ್ಟರು. ಕುಡಿದು ತಿಂದು ನಂಜೇರಿ ಸತ್ತರು. ಅವರ ನೋವನ್ನು ನೋಡಿ ವ್ರತದ ಒಳ್ಪನ್ನು ಭಾವಿಸಿ ಮುನಿಸೇವೆಗಿಂತ ಮಿಗಿಲಾದ ಲಾಭವಿಲ್ಲವೆಂದು ಧನ್ವಂತರಿ ನಿಶ್ಚಯ ಮಾಡಿಕೊಂಡನು.

ಎಂದಿನಂತೆ ಹಣವನ್ನು ಹಂಚಿಕೊಂಡು ಗೆಳೆಯರು ಮರಳಿದರು. ಧನ್ವಂತರಿ ಮತ್ತೊಂದು ವ್ರತವನ್ನು ಬೇಡಿದನು. ಮುನಿಗಳು, "ನಿನಗೆ ಯಾವ ಪ್ರಾಣಿಯ ಮೇಲಾದರೂ ಕೋಪ ಬಂದರೆ ಹಿಂದಕ್ಕೆ ಏಳಡಿಯಿಟ್ಟು ಬಳಿಕ ಮನ ಬಂದಂತೆ ಮಾಡು" ಎಂದು ವಿಧಿಸಿದರು.

ಒಂದು ಸಲ ಕಳಿಂಗ ದೇಶಕ್ಕೆ ಕದಿಯುಹೋಗಿ ಆರು ತಿಂಗಳಿದ್ದು ಹಿಂದಿರುಗಿ ಬರುತ್ತಿದ್ದಾಗ ಧನ್ವಂತರಿಗೆ, "ನಾನು ಹೆರರ ಹೆಂಡರಿಗೂ ಹಣಕ್ಕೂ ಆಸೆಪಡುತ್ತ ಕಾಲ ಕಳೆದೆ. ನನ್ನ ಹೆಂಡರಿಗೂ ಹಣಕ್ಕೂ ಆಸೆ ಪಡುವವರು ಯಾರಾದರೂ ಇರುವರೋ ಇಲ್ಲವೋ ನೋಡಬೇಕು. ಇದೊಂದು ಚೋದ್ಯ" ಎನ್ನಿಸಿತು. ಊರಿಗೆ ಬಂದು ಕೆಲವು ಕಾಲ ವಿಲಾಸ ದಿಂದಿದ್ದು ಒಂದು ದಿನ ಪಯಣ ಹೋಗುವೆನೆಂದು ಹೇಳಿ ಮನೆಬಿಟ್ಟು ಹೊರ ಟನು. ಜಿನಮಂದಿರದಲ್ಲಿ ನಡುವಿರುಳಾಗುವವರೆಗೂ ಪೂಜೆಯನ್ನು ನೋಡು ತ್ತಿದ್ದು ತನ್ನ ಮನೆಗೆ ಬಂದನು. ವಿದ್ಯಾಬಲದಿಂದ ಬಾಗಿಲ ಕದವನ್ನು ತೆಗೆದು ಮೆಲ್ಲನೆ ಒಳಹೊಕ್ಕು ನೋಡಿದನು. ಹಾಸಿಗೆಯ ಮೇಲೆ ತನ್ನ ಹೆಂಡ ತಿಯ ಜೊತೆಯಲ್ಲಿ ಯಾರೋ ಮಲಗಿದ್ದದ್ದನ್ನು ಕಂಡು ಕೋಪವುಕ್ಕಿತು. ವ್ರತವನ್ನು ನೆನೆದು ಏಳಡಿ ಹಿಂದೆ ಸರಿದನು. ಅಷ್ಟರಲ್ಲಿ ಅವನ ಹೆಂಡತಿ ಎಚ್ಚತ್ತು "ಸೆಕೆಯಾಗುತ್ತದೆ. ಅತ್ತೇ, ಅತ್ತಿತ್ತ ಹೋಗಿ" ಎಂದು ಹೊದಕೆಯನ್ನು ತೆಗೆದೆಸೆದಳು.

ತಾಯಿ ಹೆಂಡತಿಯರಿಬ್ಬರನ್ನೂ ಕಂಡು ಧನ್ವಂತರಿ ಬೆರಗಾದನು. "ಮುನಿ ಕೊಟ್ಟ ವ್ರತವನ್ನು ನೆನೆದದ್ದು ಒಳ್ಳೆಯದೆ ಆಯಿತು. ನೆನೆಯದೆ ಕೋಪದಿಂದ ಇರಿದಿದ್ದರೆ ತಾಯಿಯೂ ಗರ್ಭಿಣಿಯಾದ ಹೆಂಡತಿಯೂ ಸತ್ತು ನನಗೆ ಮಹಾ ಪಾತಕ ಸುತ್ತಿಕೊಳ್ಳುತ್ತಿತ್ತು. ಇಹ, ಪರ ಎರಡೂ ಕೆಡುತ್ತಿತ್ತು. ಎಲ್ಲ ವ್ರತಗಳಿಗಿಂತಲೂ ಈ ವ್ರತವೇ ಮೇಲು" ಎಂದು ಕೊಂಡನು. ಪರಮ ವೈರಾಗ್ಯವುಂಟಾಗಲು ಇದ್ದ ಹಣದಲ್ಲಿ ತಾಯಿಗೂ ಹೆಂಡತಿಗೂ ತಕ್ಕಷ್ಟನ್ನು ಕೊಟ್ಟು ಉಳಿದದ್ದನ್ನು ಬಡ ಶ್ರಾವಕರಿಗೂ ಜಿನ ಪೂಜೆಗೂ ಕೊಟ್ಟನು. ಬಳಿಕ ವರಧರ್ಮ ಭಟ್ಟಾರಕರ ಬಳಿ ಹೋಗಿ ದೀಕ್ಷೆ ಕೊಡಬೇಕೆಂದು ಬೇಡಿದನು.

ಅವರು, "ಹುಟ್ಟಿದ ಕಡೆ ಹೊನ್ನು ಹೆಚ್ಚುತ್ತದೆ, ಹೋದ ಕಡೆ ತಪಸ್ಸು ಹೆಚ್ಚುತ್ತದೆ—ಎಂದು ನಾಣ್ಣುಡಿಯುಂಟು. ನೀನು ಇಲ್ಲಿ ತಪಸ್ಸು ಮಾಡ ಬೇಡ" ಎಂದು ನುಡಿದು ತಮ್ಮ ಸಧರ್ಮಿಗಳಾದ ಶ್ರೀವರ್ಮ ಭಟ್ಟಾರಕ ರಿಂದ ದೀಕ್ಷೆ ಪಡೆಯ ಹೇಳಿ ಅವರಲ್ಲಿಗೆ ಕಳಿಸಿದರು. ಧನ್ವಂತರಿ ಮನೆಗೆ ಬಂದು, ವಿಶ್ವಾನುಲೋಮನನ್ನು ತನ್ನಲ್ಲಿಗೆ ಕಳಿಸುವಂತೆ ತಾಯಿಗೆ ತಿಳಿಸಿ

ಶ್ರೀ ವರ್ಮ ಭಟ್ಟಾರಕರ ಬಳಿ ಹೋಗಿ ದೀಕ್ಷೆ ಪಡೆದು ತಪಸ್ಸಿಗೆ ನಿಂತನು.

ಇತ್ತ ವಿಶ್ವಾನುಲೋಮನು ಧನ್ವಂತರಿ ಹೋದದ್ದನ್ನು ಕೇಳಿ ಮರುಗಿ, "ನನಗೆ ನನ್ನ ಕೆಳೆಯನ ಗತಿಯೆ ಗತಿ" ಎಂದು ಅವನನ್ನು ಹಿಂಬಾಲಿಸಿದನು. ಆವನು ಬಂದು ಮಾತಾಡಿಸಿದಾಗ ಧನ್ವಂತರಿ ಮುನಿ ತಪೋನಿರತನಾಗಿದ್ದದ್ದರಿಂದ ಮಾತಾಡಲಿಲ್ಲ. ವಿಶ್ವಾನುಲೋಮನು ಮುನಿದು ಬೇರೊಬ್ಬ ತಾಪಸನಿಗೆ ಶಿಷ್ಯನಾದನು. ಮರುದಿನ ತಪಸ್ಸು ಮುಗಿದ ಮೇಲೆ ಧನ್ವಂತರಿ ಮುನಿ ವಿಶ್ವಾನುಲೋಮನಿದ್ದಲ್ಲಿಗೆ ಬಂದು ಮಾತಾಡಿಸಿದನು. ಅವನು ಮುನಿಸಿನಿಂದ ಮೌನವಾಗಿದ್ದನು. ಆಗ ಧನ್ವಂತರಿ, "ನನ್ನ ತಪಸ್ಸಿನ ಫಲವೂ ನಿನ್ನ ತಪಸ್ಸಿನ ಫಲವೂ ಕಡೆಯಲ್ಲಿ ಕಾಣಬರುವುದು" ಎಂದು ನುಡಿದು ಹೊರಟುಹೋದನು.

ಇಬ್ಬರೂ ಉಗ್ರೋಗ್ರ ತಪಸ್ಸು ಮಾಡಿ ಸಮಾಧಿಮರಣ ಪಡೆದು ಧನ್ವಂತರಿ ಅಚ್ಯುತ ಕಲ್ಪದಲ್ಲಿ ಅಹಮಿಂದ್ರನಾದನು ; ವಿಶ್ವಾನುಲೋಮನು ವ್ಯಂತರಲೋಕದಲ್ಲಿ ವಾಹನ ದೇವನಾದನು. ಒಮ್ಮೆ ಇಬ್ಬರೂ ಸಂಧಿಸಿದಾಗ ಹಿಂದಿನ ಜನ್ಮದ ಸಂಗತಿಗಳನ್ನು ನೆನೆದುಕೊಂಡರು. ಅಚ್ಯುತೇಂದ್ರನು "ನಮ್ಮ ನಿಮ್ಮ ತಪಸ್ಸಿನ ಫಲವನ್ನು ನೋಡು" ಎಂದು ಹಂಗಿಸಿದನು. ವಾಹನದೇವನು ನಾಚಿದರೂ, "ನಿಮ್ಮಲ್ಲಿಯೇ ಅಲ್ಲ, ನಮ್ಮಲ್ಲಿಯೂ ಒಳ್ಳೆಯವರಿದ್ದಾರೆ. ನನ್ನನ್ನು ನೋಡಬೇಡ" ಎಂದನು. ಇಬ್ಬರೂ ಹಟತೊಟ್ಟು ಯಾರ ತಪಸ್ಸು ಹೆಚ್ಚೆಂದು ಪರೀಕ್ಷಿಸಹೊರಟರು.

ಮೈಗೆ ಬಳ್ಳಿ ಹಬ್ಬಿ ಹುತ್ತ ಬೆಳೆದು ತಪಸ್ಸಿನಲ್ಲಿ ನಿರತನಾಗಿದ್ದ ಜಮದಗ್ನಿಯೆಂಬ ಜಟಾಧಾರಿ ಮುನಿಯನ್ನು ವಾಹನದೇವನು ತೋರಿ, 'ಇವನ ತಪಸ್ಸನ್ನು ನೋಡೆ'ಂದನು. "ಮೂರ್ಖನ ತಪಸ್ಸು ಶಾಶ್ವತವಲ್ಲ" ಎಂದು ಅಹಮಿಂದ್ರನು ತನ್ನ ಮಾಯೆಯಿಂದ ಬಹು ಸುಲಭವಾಗಿ ಆ ಮುನಿಯ ತಪಸ್ಸನ್ನು ಭಂಗಪಡಿಸಿದನು. ಬಳಿಕ, "ನಮ್ಮ ಋಷಿಗಳು ಹಾಗಿರಲಿ, ಸಾಮಾನ್ಯ ಗೃಹಸ್ಥನೊಬ್ಬನ ವ್ರತವನ್ನು ನೀನು ಭಂಗಪಡಿಸಿದರೆ ನಮಗಿಂತ ಅಜ್ಞಾನಿಗಳಿಲ್ಲವೆಂದು ಒಪ್ಪಿಕೊಳ್ಳುತ್ತೇನೆ" ಎಂದು ಪಂತ ಕಟ್ಟಿ, ರಾತ್ರಿ ಪ್ರತಿಮಾಯೋಗದಲ್ಲಿ ನಿಂತಿದ್ದ ನನ್ನನ್ನು ತೋರಿಸಿದನು. ವಾಹನದೇವನು ಎಂಥೆಂಥ ಭಯಂಕರ ಮಾಯೆಯನ್ನು ಪ್ರಯೋಗಿಸಿದರೂ ವ್ರತಭಂಗ ಮಾಡ

ಲಾಗಲಿಲ್ಲ. ಆಗ ಆತನು ಮಿಥ್ಯಾತ್ವವನ್ನು ಬಿಟ್ಟು ಸಮ್ಯಗ್ದೃಷ್ಟಿಯಾದನು.

ಅಚ್ಯುತೇಂದ್ರನು ಬಂದು ನನಗೆ ನಮಸ್ಕಾರ ಮಾಡಿ, "ಪರ್ವ ದಿನಗಳಲ್ಲಿ ಅಕೃತ್ರಿಮ ಚೈತ್ಯಾಲಯಗಳಿಗೆ ಹೋಗಿ ಬರಲು ಸಹಕಾರಿಯಾಗುತ್ತದೆ; ತೆಗೆದುಕೊಳ್ಳಿ" ಎಂದು ಪ್ರಾರ್ಥಿಸಿ ಒಡಂಬಡಿಸಿ ಈ ಗಗನಗಾಮಿನೀ ವಿದ್ಯೆಯನ್ನು ಕೊಟ್ಟು ದೇವಲೋಕಕ್ಕೆ ಹೋದನು. ವಾತ್ಸಲ್ಯದಿಂದ ನಾನಿದನ್ನು ನಮ್ಮ ದೇವಸ್ಥಾನದ ಮಾಣಿ ವರಸೇನನಿಗೆ ಕೊಟ್ಟೆನು.

—ಹೀಗೆಂದು ಜಿನದತ್ತಸೆಟ್ಟಿ ಹೇಳಲು ಕೇಳಿ ಲಲಿತಾಂಗನು ಬೆರಗಾದನು. "ಈತ ಕಿರುಕುಳ ಮನುಷ್ಯ. ಇವನಿಗೆ ದೇವತೆಗಳೂ ಎರಗಿದರೆಂದರೆ, ಧರ್ಮಕ್ಕಿಂತ ದೊಡ್ಡದೇನೂ ಇಲ್ಲ" ಎಂದು ನಿಶ್ಶಂಕನಾಗಿ ನಂಬಿದನು. ನಂಬಿ ಜೈನ ದೀಕ್ಷೆ ಪಡೆದು ತಪಸ್ಸುಮಾಡಿ ಮುಕ್ತನಾದನು.

### ಟಿಪ್ಪಣಿ

ಇದು ಧರ್ಮಾಮೃತವೆಂಬ ಗ್ರಂಥದಲ್ಲಿನ ಒಂದು ಕಥೆ. 'ಧರ್ಮವನ್ನು ಕೈಕೊಂಡು ನಡಸುವವನು ಸಂದೇಹಪಡಬಾರದು' ಎಂಬುದನ್ನು ಈ ಕಥೆಯಲ್ಲಿ ಒತ್ತಿ ಹೇಳಿದೆ. ಇದೇ ರೀತಿ ಜೈನ ಧರ್ಮದ ಮುಖ್ಯಾಂಶಗಳನ್ನೆಲ್ಲ ಈ ಗ್ರಂಥದಲ್ಲಿ ಒಂದೊಂದು ಕಥೆಯಲ್ಲಿ ವಿವರಿಸಿದೆ.

ಧರ್ಮಾಮೃತವನ್ನು ಬರೆದವನು ನಯಸೇನ. ಇವನು ಕ್ರಿ.ಶ. ೧೨ನೆಯ ಶತಮಾನದಲ್ಲಿದ್ದನು. ಕನ್ನಡದಲ್ಲಿ ಸಂಸ್ಕೃತವನ್ನು ಬೆರಸುವುದನ್ನು ಇವನೊಪ್ಪುವುದಿಲ್ಲ; ಶುದ್ಧ ಕನ್ನಡದಲ್ಲಿ ಬರೆಯಬೇಕೆನ್ನುತ್ತಾನೆ. ಜನರಲ್ಲಿ ರೂಢಿಯಾಗಿರುವ ಸಂಸ್ಕೃತ ಮಾತುಗಳನ್ನೂ ಗಾದೆಗಳನ್ನೂ ಸೇರಿಸಿಕೊಂಡು ಕನ್ನಡದ ಬಳಕೆ ಮಾತಿನ ಶೈಲಿಯಲ್ಲಿ ಸಾಮಾನ್ಯ ಜನರಿಗೆ ಅರ್ಥವಾಗುವಂತೆ ತಾನು ಗ್ರಂಥರಚನೆ ಮಾಡಿದ್ದಾನೆ.

ಇಂಥ ಗ್ರಂಥದಲ್ಲಿ ಬೇರೆ ಮತಧರ್ಮಗಳ ವಿಮರ್ಶೆ ಬರುವುದು ಸಹಜ. ಬಂದಾಗ ಜನರ ಮನ ನೋಯುವಂತೆ ಕಟುವಾಗಿ ಬರೆಯದೆ ಜೈನಧರ್ಮದ ಪ್ರಭಾವವನ್ನು ಎತ್ತಿ ತೋರಿಸುವುದನ್ನು ಮಾತ್ರ ಗುರಿಯಾಗಿಟ್ಟುಕೊಂಡಿದ್ದಾನೆ.

ಸುಲಭ ಶೈಲಿಯ ಈ ಗ್ರಂಥ ಆ ಕಾಲದಲ್ಲಿ ಜನರಂಜಕವಾಗಿತ್ತೆಂದು ಕಾಣುತ್ತದೆ.

——:——

# ತಾಂಡವ ಮುನಿ

ಶ್ರೀ ಜನಕಜಾರಮಣ ವಿಮಲ ಸ
ರೋಜಸಂಭವ ಜನಕನನುಪಮ
ರಾಜಶೇಖರ ವಿನುತ ನಿಖಿಲಾಮರ ಕಿರೀಟಚಯ
ರಾಜಿತಾಮಲ ಲಲಿತಪದ ಪಂ
ಕೇಜನಾನತ ಜನದಯಾ ಸುರ
ಭೂಜ ತೊರವೆಯ ರಾಯ ನರಹರಿ ಪಾಲಿಸುಗೆ ಜಗವ

[ಸುಮಂತ್ರನು ಸೀತಾರಾಮಲಕ್ಷ್ಮಣರನ್ನು ಗಂಗಾತೀರದಲ್ಲಿ ಬಿಟ್ಟು ಅವರನ್ನಗಲಲಾರದೆ ಕಂಬನಿದುಂಬಿ ಕಷ್ಟದಿಂದ ಅಯೋಧ್ಯೆಗೆ ಹಿಂದಿರುಗಿದನು. ಬರಿದೇರನ್ನು ಕಂಡು ಪುರಜನರು ಅಳಲಿದರು. ಅರಮನೆಯಲ್ಲಿ ದಶರಥ ಮಹಾರಾಜ ದುಃಖದಿಂದ ಬೆಂದು ಬಿಸುಸುಯ್ಯುತ್ತಿದ್ದನು. ಸುಮಂತ್ರ ಅರಮನೆಯನ್ನು ಹೊಕ್ಕು ರಾಮನು ಗಂಗೆಯನ್ನು ದಾಟಿ ಅರಣ್ಯ ಪ್ರವೇಶಮಾಡಿದನೆಂದು ತಿಳಿಸಿದನು. ಕೇಳಿ ದಶರಥನು ದೊಪ್ಪನೆ ಬಿದ್ದನು. ಕೈಸನ್ನೆಯಲ್ಲಿ ಸುಮಂತ್ರನನ್ನು ಹೋಗಹೇಳಿ ರಾಮನನ್ನು ನೆನೆದು ಪರಿಪರಿಯಾಗಿ ಹಲುಬಿದನು. ಕೌಸಲ್ಯೆ, "ರಾಜೇಂದ್ರ, ನೀನು ಸತ್ಯವ್ರತ. ನಿನ್ನ ಆ ವ್ರತವನ್ನುಳಿಸಿ, ಕುಲಸಂಪತ್ತಿನ ಸಿರಿಗೆ ಮಗ ಆಧಾರವಾದನೆಂದು ಸಂತೋಷಪಡಬೇಕು. ಹೀಗೆ ಕಳವಳಪಡುವುದೆ?" ಎಂದು ಸಮಾಧಾನ ಹೇಳಿದಳು. ದೊರೆಗೆ ಸಮಾಧಾನವಾಗಲಿಲ್ಲ. "ಮರೆಯುವಂಥ ಮಗನೇ, ರಾಮ" ಎಂದು ಸಂಕಟಪಟ್ಟನು. ಕುಮಾರನನ್ನು ಕಾಡಿಗೆ ಕಳಿಸಿ ತಾನು ಬದುಕುವುದಿಲ್ಲವೆಂದು ನುಡಿದು ವೈಶ್ಯ ತಾಪಸರಿಂದ ತನಗೆ ಶಾಪ ಬಂದ ಸಂಗತಿಯನ್ನು ಹೇಳತೊಡಗಿದನು.]

ಕೌಸಲ್ಯೇ ಕೇಳು. ನನಗೆ ಯೌವನದ ಆರಂಭ ಕಾಲ. ಆ ಉನ್ಮತ್ತ ಯೌವನದಲ್ಲಿ ಬೇಟೆಯಲ್ಲಿ ಅತ್ಯಾಸಕ್ತಿಯಿತ್ತು. ಬೇಟೆಯ ಹುಚ್ಚೇ ನನ್ನನ್ನು ಹಾಳು ಮಾಡಿತು.

ಒಮ್ಮೆ ನಾನು ಬೇಟೆಗೆ ಹೋಗಿ ಕಾಡಿನಲ್ಲಿ ನಡುರಾತ್ರಿಯಲ್ಲಿ ಬಿಲ್ಲಿಗೆ ಬಾಣಹೂಡಿ ಮೃಗ ಬಂದೀತೆ ಎಂದು ಕಾಯುತ್ತಿದ್ದೆ. ಕಾದು ಕೂತಿದ್ದಾಗ 'ಘುಳು ಘುಳು ಘುಳು' ಎಂದು ಸದ್ದಾಯಿತು. ಹಂದಿ ನೀರಿನಲ್ಲಿ ಸದ್ದು

ಮಾಡುತ್ತಿರುವುದೆಂದು ತಿಳಿದು ಹೂಡಿ ಹಿಡಿದಿದ್ದ ಅಂಬನ್ನು ಎಳೆದು ಬಿಟ್ಟೆ. ಆಕ್ಷಣವೆ ಅತ್ತಕಡೆಯಿಂದ ಆರ್ತನಾದ ಕೇಳಬಂತು. 'ಶಂಕರಾ! ಸದಾಶಿವಾ!' ಎಂದು ನೊಂದು ಕೂಗಿ ಯಾರೋ ಬಿದ್ದಂತಾಯಿತು.

ಕೂಡಲೆ ಬಿಲ್ಲನ್ನಲ್ಲಿಯೆ ಎಸೆದುಬಿಟ್ಟು ದನಿ ಬಂದ ಕಡೆಗೋಡಿದೆನು. ಅಲ್ಲಿ ನೆಲದ ಮೇಲೆ ಕೆಡೆದಿದ್ದ ಮುನಿಕುಮಾರನನ್ನು ಕಂಡೆನು. ಕಂಡು ಎದೆ ಕದಡಿಹೋಯಿತು. ಸುತ್ತಿಕೊಂಡ ಪಾಪಕ್ಕೆ ಮನಸ್ಸು ಬೆದಬೆದನೆ ಬೆಂದು ಹೋಯಿತು. ನಡುನಡುಗುತ್ತ ಅವನನ್ನು ಮಾತಾಡಿಸಿದೆನು: "ನೀನು ಯಾರು? ನರನೋ, ನಿಶಾಚರನೋ? ನಿಜ ಹೇಳು" ಎಂದು ಕೇಳಿದೆನು.

ಆತ, "ನಾವು ನರರು; ವೈಶ್ಯರು. ತೀರ್ಥಯಾತ್ರೆಗಾಗಿ ಸುತ್ತುತ್ತಿದ್ದೆವು. ಯಾರಾದರೇನು? ಇನ್ನು ನನಗೆ ಇಲ್ಲಿಯ ಋಣ ಹರಿಯಿತು. ನನಗೆ ಬಲು ಮುಪ್ಪಿನ ತಂದೆ ತಾಯಿಗಳಿದ್ದಾರೆ. ಅಲಸದೆ ಅವರ ಶುಶ್ರೂಷೆ ಮಾಡುತ್ತಿದ್ದೆ. ಅವರನ್ನು ಹೊತ್ತು ಎಲ್ಲ ತೀರ್ಥಕ್ಷೇತ್ರಗಳನ್ನೂ ದರ್ಶನ ಮಾಡಿಸಿದೆ. ಕಾಶಿಯೊಂದುಳಿಯಿತು. ಅವರನ್ನು ಕಾಶಿಗೆ ಕರೆದುಕೊಂಡು ಹೋಗಬೇಕೆಂದು ಮಾಡಿಕೊಂಡಿದ್ದೆ. ಆ ಸಂಕಲ್ಪ ನಿಲುಕದಾಯಿತು. "ದೈವಗತಿ ಬೇರೆ ಇತ್ತು" ಎಂದು ನೊಂದು ನುಡಿದನು.

ಅವನೇ ತಾಂಡವ ಮುನಿ. ತಂದೆತಾಯಿಗಳ ಸೇವೆಯಲ್ಲಿ ತೊಡಗಿ ಹಣ್ಣು ಮುದುಕರಾದ ಅವರನ್ನು ಕಾವಡಿಯಲ್ಲಿ ಕೂರಿಸಿ ಹೊತ್ತು ತೀರ್ಥಯಾತ್ರೆಯಲ್ಲಿ ತೊಳಲುತ್ತಿದ್ದನು. ಆ ರಾತ್ರಿ ಕಾಡಿನ ನಡುವೆ ಅವರು ನೀರು ಬೇಕೆನ್ನಲು ಕಾವಡಿಯನ್ನಿಳಿಸಿ ಚರ್ಮದ ತಂಬಿಗೆಯನ್ನು ತೆಗೆದುಕೊಂಡು ನೀರು ಹುಡುಕುತ್ತ ಬಂದು ನನ್ನ ಬಾಣಕ್ಕೆ ಗುರಿಯಾಗಿದ್ದನು. ನನ್ನ ಮಾತಿನ ಸರಣಿಯಿಂದ ನಾನು ದೊರೆಯೆಂದು ತಿಳಿದನು. ನನ್ನ ಮನಸ್ಸಿನ ಸಂಕಟವನ್ನರಿತು, "ಏಕೆ ಚಿಂತಿಸುತ್ತೀಯೆ? ಯಾರ ಆಯುಸ್ಸನ್ನು ಯಾರು ಮುಗಿಸಬಲ್ಲರು? ಆತ್ಮನಿಗೆ ಅಳಿವಿಲ್ಲ. ಮಾಯೆಯ ತೆರೆ ಆತ್ಮಜ್ಯೋತಿಯನ್ನು ಮರೆಮಾಡಿರುತ್ತದೆ, ಅಷ್ಟೆ. ಇದಕ್ಕೆ ನೀನಳುಕಬೇಡ" ಎಂದು ನನಗೆ ಸಮಾಧಾನ ಹೇಳಿದನು.

"ಅಯ್ಯಾ ರಾಜಾ, ಹಲವು ಮಾತೇಕೆ? ನಮ್ಮ ತಾಯಿಯನ್ನು ಸಲಹು; ತಾತನನ್ನು ಕಾಪಾಡು. ನಿನಗೆ ಅಕ್ಷಯ ಫಲ ದೊರೆಯುವುದು.

ನಿನ್ನ ಪಾಪಕ್ಕೆ ಇದೇ ತಕ್ಕ ಪ್ರಾಯಶ್ಚಿತ್ತ. ಅವರಿಗೆ ನೀರನ್ನೆರೆ. ಮೇಲುಪಚಾರ ಏನೇನಾಗಬೇಕೋ ಅದನ್ನೆಲ್ಲ ಮಾಡು. ಗಂಗಾತೀರಕ್ಕೆ ಹೋಗಬಯಸಿದರೆ ಕಾಶಿಗೆ ಕರೆದುಕೊಂಡು ಹೋಗು. ಮೃತ ಸಂಸ್ಕಾರದವರೆಗೂ ಅವರಿಗೆ ತಕ್ಕ ಉಪಚಾರ ಮಾಡುತ್ತಿರುವುದು ಅರಸಾ, ಇನ್ನನ್ನೇ ಕೂಡಿದ್ದು" ಎಂದು ತನ್ನ ತಂದೆ ತಾಯಿಗಳ ರಕ್ಷಣೆಯ ಭಾರವನ್ನು ನನಗೊಪ್ಪಿಸಿದನು.

ಬಳಿಕ ಎದೆಗೆ ನಾಟಿದ್ದ ಸರಳನ್ನು ಕಿತ್ತೆಸೆದನು. ರಕ್ತಸುರಿದು ಬಳಲಿ ಕಣ್ಣು ಮುಚ್ಚಿದನು. ಹೃದಯ ಕಮಲದಲ್ಲಿ ಶಂಕರನ ಪರಮ ಮೂರ್ತಿಯನ್ನಿರಿಸಿ ಧ್ಯಾನಮಗ್ನನಾದನು. ಆತ್ಮಜ್ಯೋತಿ ತಲೆಯ ಚಿಪ್ಪನ್ನೊಡೆದು ಹೊರ ಹಾಯ್ದಿತು. ಅದನ್ನು ಕಂಡು ನನ್ನ ಮನಸ್ಸಿನಲ್ಲಿ ಅನುತಾಪದ ಬೆಂಕಿ ಹೊತ್ತಿ ಹೊಗೆಯಾಡತೊಡಗಿತು. ಕಣ್ಣಿನಲ್ಲಿ ನೀರುಕ್ಕಿತು. ಸಂಕಟದಲ್ಲಿ ಬೇಯುತ್ತ ತಂಬಿಗೆಯಲ್ಲಿ ನೀರು ತುಂಬಿಕೊಂಡು ತಾಂಡವನ ತಾಯ್ತಂದೆಗಳನ್ನು ಅರಸುತ್ತ ಹೋದೆನು.

ಆ ಮುಪ್ಪಿನ ತಪಸ್ವಿಗಳು ಮುತ್ತು ಸಡಿಲಿದ ಚಿಪ್ಪಿನ ಹಾಗೆ ಬಾಯಿ ಬಾಯಿ ಬಿಡುತ್ತಿದ್ದರು. "ನೀರೊಳಗೆ ಜಾರಿ ಬಿದ್ದನೋ? ಕಾಳೋರಗಕ್ಕ ವೇನಾದರೂ ಕಚ್ಚಿತೋ? ಹುಲಿ ಹಿಡಿಯಿತೋ? ಹಳ್ಳಕೊಳ್ಳದಲ್ಲೆಲ್ಲಾದರೂ ಬಿದ್ದನೋ? ಅಲ್ಲದಿದ್ದರೆ, ಕ್ರೂರರಾದ ಬೇಟೆಗಾರರ ಶಸ್ತ್ರದೇಟಿಗೆ ಸಿಕಿ ಅಳಿದನೋ? ಇನ್ನೂ ಬರಲಿಲ್ಲವಲ್ಲ! ಹಾ, ಕಂದಾ, ಹಾ!" ಎಂದು ಗೋಳಾಡುತ್ತಿದ್ದರು.

ತಾಂಡವನ ತಾಯ್ತಂದೆಗಳ ಆ ಗೋಳನ್ನು ಕೇಳಿ ನೊಂದೆನು. ಮಾತಾಡದೆ ಕೈಯ ತಂಬಿಗೆಯನ್ನು ಕೆಳಗಿಳಿಸಿದೆನು. ಅವರು, "ಇಂದು ಇದೇಕಪ್ಪಾ ತಡಮಾಡಿದೆ? ನೀರು ತಂದಿದ್ದರೆ ಎರೆ" ಎಂದರು. ನನ್ನ ಹರ್ಷವೆಲ್ಲ ಹಾರಿಹೋಯಿತು. ಮುಗುಮದಿಂದ ಮೌನವಾಗಿಯೆ ನೀರೆರೆದೆನು.

"ಮಗನೇ, ಈ ನೀರು ಹೊಲಸಾಗಿ ಕಾಣುತ್ತದೆ. ನಮ್ಮ ಸೇವೆಯಲ್ಲಿ. ಆಲಸನಾದೆಯಲ್ಲಪ್ಪಾ. ಅಯ್ಯೋ, ಈ ಪಾಪಿಗಳ ಮೇಲೆ ವಿಧಿ ಮುಳಿದನೆ?" ಎಂದು ನಾನೆರೆದ ನೀರನ್ನೆಲ್ಲ ಚೆಲ್ಲಿಬಿಟ್ಟರು. ಆಗ ನಾನು ನಡೆದದ್ದನ್ನೆಲ್ಲ ತಿಳಿಸಿದೆನು ಅರಿಯದೆ ನನ್ನಿಂದಾದ ಅಪರಾಧವನ್ನು ತಿಳಿಯಹೇಳಿದೆನು. ಹೇಳಿ, "ನನಗೆ ಶಾಪ ಕೊಡಿ" ಎಂದು ಕೈಮುಗಿದು ನಿಂತೆನು.

ನನ್ನ ಮಾತು ಕೇಳಿ ಆ ವೃದ್ಧರು ಕಾವಡಿಯಲ್ಲಿ ಹೊರಳಿ ಬಿದ್ದರು. ನಡುಗುವ ತಲೆ ಪುತ್ರಶೋಕದಿಂದ ಮತ್ತೂ ನಡುಗತೊಡಗಿತು. ಬತ್ತಿದ ಕಣ್ಣುಗಳಿಂದ ಕಂಬನಿ ಉರುಳತೊಡಗಿತು. "ಅಯ್ಯೋ! ವಿಧಿಯು ನಮಗೆ ಈ ರೀತಿಯ ಪುತ್ರಶೋಕವನ್ನು ಕರುಣಿಸಿದನೆ! ಹಾ ಮಗನೆ! ನಮ್ಮನ್ನು ಪರಕ್ಕೆ ಸಲ್ಲಿಸದೆ, ನಮಗೆ ಸದ್ಗತಿ ಕಾಣಿಸದೆ ನೀನೆ ಹೀಗೆ ಹೋಗಿ ಬಿಡುವುದೆ? ಹಾ, ಕಂದಾ!" ಎಂದು ಗೋಳಾಡಿದರು. ಬಳಿಕ ನನ್ನನ್ನು ಕುರಿತು "ಎಲೆ ಮಹಾಪುರುಷಾ, ಇದು ನಮ್ಮ ಪೂರ್ವಕರ್ಮದ ಫಲ. ನೀನೇನು ಮಾಡೀಯೆ? ನಮ್ಮ ಚೈತನ್ಯವುಡುಗಿ ಹೋಗುವ ಮೊದಲೆ ನಮ್ಮನ್ನು ನಿನ್ನಿಂದಳಿದ ಕಂದನ ಬಳಿಗೆ ಕರೆದುಕೊಂಡು ಹೋಗು. ಮಗನಲ್ಲಿ ನಮಗೆ ಮಾತುಂಟು. ನಮ್ಮನ್ನು ಮಗನ ಬಳಿಗೈದಿಸುವುದು ನಿನ್ನ ಕಾರ್ಯಕ್ಕೆ ಕಳಸವಿಟ್ಟಂತೆ" ಎಂದು ನನಗೆ ಕೈಮುಗಿದು ಬೇಡಿದರು.

ಕಾವಡಿಯನ್ನು ಹೊತ್ತುಕೊಂಡು ನಡೆದು ನದಿಯೊತ್ತಿನಲ್ಲಿ ಕಂದನ ಬಳಿಯಲ್ಲಿ ಇಬ್ಬರನ್ನೂ ಇಳಿಸಿದೆನು. ಚಲಿಸಲಾರದ ಆ ಮುದಿಯರು ಮಗನ ಮೈಯನ್ನು ತಡವರಿಸಿ ತಡವರಿಸಿ ನೋಡಿದರು. ಇರಿದ ಅಂಬಿನ ಗಾಯವನ್ನು ತಡವರಿಸಿ ಆಳವನ್ನು ತಡೆಯಲಾರದೆ ಮತ್ತೆ ಗೋಳಾಡಿದರು. "ಕಂದಾ, ಕೊಟ್ಟ ಮಾತನ್ನು ನಡಸದೆ, ಬೇಸತ್ತು ನಮ್ಮನ್ನು ಬಿಸುಟುಹೋದೆಯಾ? ನಮಗಿನ್ನೇನು ಗತಿ? ಯಾವ ದಾರಿ? ಹೇಳು ಕಂದಾ" ಎಂದು ಹಲುಬಿದರು.

ಅಳಿದ ನಿಮ್ಮ ಮಗನ ಹಾಗೆಯೆ ನಿಮ್ಮನ್ನು ನಾನು ಕಾಪಾಡುತ್ತೇನೆ. ನನ್ನ ಮಾತು ನಂಬಿ" ಎಂದು ಪ್ರಾರ್ಥಿಸಿಕೊಂಡೆನು. ನನ್ನ ಮಾತು ಕೇಳಿ ಅವರಿಗೆ ಅಳಲುಬ್ಬಿತು. ಮಗನನ್ನಗಲಿ ಜೀವ ಹಿಡಿದಿರಲೊಲ್ಲೆವೆಂದರು. "ನಿನಗೂ ಹೀಗೆಯೇ ಸುತ ವಿಯೋಗದಿಂದ ಅಳಿವಾಗಲಿ" ಎಂದು ಶಪಿಸಿ ಇಬ್ಬರೂ ಪ್ರಾಣಬಿಟ್ಟರು. ಬಳಿಕ ಅವರಿಗೆ ಅಗ್ನಿಸಂಸ್ಕಾರದಿಂದ ಉತ್ತರ ಕ್ರಿಯೆ ಮಾಡಿ ಊರಿಗೆ ಬಂದೆನು.

—ಹೀಗೆಂದು ಕಥೆ ಹೇಳಹೇಳುತ್ತಲೆ ದಶರಥ ಮಹಾರಾಜನು ಬಹಿರಂಗ ಭಾವಗಳನ್ನೆಲ್ಲ ಮರೆತನು. ಸಚ್ಚಿದಾನಂದ ಸ್ವರೂಪವಾದ ಆತ್ಮ ತತ್ತ್ವದಲ್ಲಿ ಐಕ್ಯಭಾವನೆಯನ್ನು ಪಡೆದು ದೇಹವನ್ನು ತೊರೆದನು.

## ಟಿಪ್ಪಣಿ

'ತೊರವೆಯ ರಾಮಾಯಣ' ಎಂದು ಪ್ರಸಿದ್ಧವಾಗಿರುವ ಕನ್ನಡ ರಾಮಾಯಣದಿಂದ ಈ ಕಥೆಯನ್ನಾಯ್ದಿದೆ. ವಾಲ್ಮೀಕಿ ರಾಮಾಯಣವನ್ನನುಸರಿಸಿ ರಾಮಕಥೆಯನ್ನು ಸರ್ವಸುಲಭವಾಗಿ ವಿವರಿಸುವ ಸರಳವಾದ ಗ್ರಂಥ ಈ ತೊರವೆಯ ರಾಮಾಯಣ.

ಇದನ್ನು ಬರೆದ ಕವಿಯ ಹೆಸರು ನರಹರಿ. ಬಿಜಾಪುರದ ಹತ್ತಿರ ಇರುವ ತೊರವೆಯೆಂಬ ಗ್ರಾಮ ಇವನ ಊರು. ಅಲ್ಲಿನ ನರಸಿಂಹಸ್ವಾಮಿಯ ಅಂಕಿತದಲ್ಲಿ ಕಾವ್ಯರಚನೆ ಮಾಡಿದ್ದಾನೆ. ಕವಿಯ ಊರಿನಿಂದ ಗ್ರಂಥಕ್ಕೆ 'ತೊರವೆಯ ರಾಮಾಯಣ' ಎಂಬ ಹೆಸರು ಬಂದಿದೆ; 'ಗದುಗಿನ ಭಾರತ' ಎಂಬಂತೆ.

'ಕುಮಾರ ವಾಲ್ಮೀಕಿ' ಎಂಬುದು ನರಹರಿಗೆ ಬಿರುದು. ಇವನು 'ಕುಮಾರವ್ಯಾಸ'ನನ್ನು ಆದರ್ಶವಾಗಿಟ್ಟುಕೊಂಡಂತಿದೆ. ಅವನನ್ನು ಮೆಚ್ಚಿ ಸ್ಮರಿಸಿದ್ದಾನೆ. ಇವನ ಕಾಲ ಸುಮಾರು ಕ್ರಿ. ಶ. ೧೫೦೦.

ತೊರವೆಯ ರಾಮಾಯಣ ಜನಪ್ರಿಯವಾದ ಕಾವ್ಯ.

--- : ---

# ಕೋಳೂರು ಕೊಡಗೂಸು

ಶ್ರೀಗೌರೀ ಪ್ರೇಮಸುಧಾ
ಸಾಗರಪೂರ್ಣೇಂದು ಸಸ್ಮಿತಾಮಳವದನಾ
ಭೋಗಂ ಭೋಗೀಶ್ವರಧರ
ನಾಗಮ ನುತನೀಗೆ ಸೌಖ್ಯಮಂ ಶಿವಲಿಂಗಂ

[ ಶಿವನ ಮುಖ ಶ್ರೀಗೌರಿಯ ಪ್ರೇಮಾಮೃತದ ಸಾಗರಕ್ಕೆ ಪೂರ್ಣಚಂದ್ರನಾಗಿರುವುದು ; ಮುಗುಳು ನಗೆಯಿಂದ ಕೂಡಿ ನಿರ್ಮಲವಾಗಿರುವುದು. ಹೀಗೆ ನಗುಮೊಗವನ್ನು ತಳೆದು ಸರ್ಪಗಳನ್ನು ಮುಡಿದು ಆಗಮಗಳಿಂದ ಹೊಗಳಿಸಿಕೊಳ್ಳುತ್ತಿರುವ ಶಿವಲಿಂಗ ಸೌಖ್ಯವನ್ನು ಕೊಡಲಿ. ]

ಕೋಳೂರೆಂಬ ಒಂದು ಪಟ್ಟಣವುಂಟು. ಊರ ಹೊರವಳಯದಲ್ಲಿ ಸೊಗಸಾದ ಉದ್ಯಾನಗಳು ; ಕೋಟೆಯನ್ನು ಬಳಸಿದ ಅಗಳಿನಲ್ಲಿ ಕಮಲ, ಕನ್ನೈದಿಲೆ ಮೊದಲಾದ ಹೂವುಗಳು ; ಊರೊಳಗೆ ದೊಡ್ಡ ದೊಡ್ಡ ಸುಂದರ ಮಂದಿರಗಳು, ಮಂಟಪಗಳು, ಶಿವಾಲಯಗಳು —ಇವುಗಳಿಂದ ಆ ಪಟ್ಟಣ ಕಳೆಗೂಡಿ ಬೆಳಗುತ್ತಿತ್ತು. ಆ ಪಟ್ಟಣದಲ್ಲಿ ಶಿವದೇವನೆಂಬೊಬ್ಬ ಭಕ್ತನಿದ್ದನು. ಅವನು ಗುಣವಂತ ; ಶಿವಪೂಜಾಸಕ್ತ. ಅವನಿಗೊಬ್ಬ ಮಗಳಿದ್ದಳು. ಅವಳು ಚೆಲುವೆ, ವಿನಯ ಸಂಪನ್ನೆ. ಅವಳ ಮಾತು ಅಮೃತದಂತೆ ಮೃದು. ಅವಳಿನ್ನೂ ಚಿಕ್ಕವಳು ; ಮದುವೆಯಿಲ್ಲ ; ಕನ್ಯೆ.

ಒಂದು ದಿನ ಶಿವದೇವ ದೇವಕಾರ್ಯಕ್ಕಾಗಿ ಹೆಂಡತಿಯೊಡನೆ ನೆರೆಯೂರಿಗೆ ಹೋಗಬೇಕಾಯಿತು. ಪ್ರಯಾಣಕ್ಕೆ ಸಿದ್ಧಮಾಡಿಕೊಂಡು ಮಗಳನ್ನು ಮನೆಯ ಕಾವಲಿಗೆ ಇಟ್ಟು ಹೋಗಬೇಕೆಂದು ನೆನೆದು ಅವಳನ್ನು ಹತ್ತಿರ ಕರೆದನು. ಅವಳ ಮೈ ತಡವಿ ಗಲ್ಲ ಹಿಡಿದು ಮುದ್ದಿಸಿ ಪ್ರೀತಿಯಿಂದ ಸ್ವಲ್ಪ ಹೊತ್ತು ನೋಡುತ್ತಿದ್ದನು. ಬಳಿಕ ಅವಳಿಗೆ “ಮಗಳೇ, ಆಚೆಯೀಚೆಯ ಮಕ್ಕಳೊಡನೆ ಆಟಕ್ಕೆ ಹೋಗಬೇಡ. ಮರೆಯಬೇಡ ತಾಯೀ. ಹಿತ್ತಿಲ ಕಡೆಯ ಕೋಣೆಗೆ ಒಬ್ಬಳೇ ಹೋಗಬೇಡ. ಮನೆಬಿಟ್ಟು ಎಲ್ಲಿಯೂ ಹೋಗ

ಬೇಡ. ನಾನು ನಾಳೆ ಹಿಂದಿರುಗಿ ಬರುವಾಗ ನಿನ್ನ ಮನಸ್ಸಿಗೆ ಒಪ್ಪಾಗುವ ಬಟ್ಟೆ ತಂದುಕೊಡುತ್ತೇನೆ; ಬಂಗಾರದ ಬೊಂಬೆ ತಂದುಕೊಡುತ್ತೇನೆ; ಒಡವೆ ತಂದುಕೊಡುತ್ತೇನೆ. ಎಚ್ಚರಿಕೆಯಿಂದ ಮನೆಯನ್ನು ಕಾದುಕೊಂಡಿರು. ದಿನವೂ ಶಿವಾಲಯಕ್ಕೆ ಹೋಗುತ್ತಿರು. ಒಂದು ಬಳ್ಳ ಕಪಿಲೆಯ ಹಾಲನ್ನು ತೆಗೆದುಕೊಂಡು ಹೋಗಿ ಹೊತ್ತು ತಪ್ಪದಂತೆ ಶಿವಲಿಂಗಕ್ಕೆ ಒಪ್ಪಿಸಬೇಕು. ಇದು ನನ್ನ ವ್ರತ. ಇದನ್ನು ನಡಸುತ್ತಿರು. ತಪ್ಪಬೇಡ" ಎಂದು ಬುದ್ಧಿ ಹೇಳಿದನು. ಅವಳನ್ನು ಒಪ್ಪಿಸಿ ಹೆಂಡತಿಯೊಡನೆ ನೆರೆಯೂರಿಗೆ ಹೊರಟುಹೋದನು.

ಹುಡುಗಿ ಪರಿಮಳೋದಕದಲ್ಲಿ ಸ್ನಾನ ಮಾಡಿದಳು; ಒಳ್ಳೆಯ ಮಡಿ ಸೀರೆಯನ್ನುಟ್ಟುಕೊಂಡಳು; ಹಣೆಗೆ ವಿಭೂತಿಯಿಟ್ಟು ಶೃಂಗಾರ ಮಾಡಿಕೊಂಡಳು. ಆಮೇಲೆ ಶಿವನಿಗೆ ಮೀಸಲಾಗಿಟ್ಟಿದ್ದ ಕಪಿಲೆಯ ಹಾಲನ್ನು ಕಮ್ಮಗೆ ಇನಿದಾಗುವ ಹಾಗೆ ಕಾಸಿ ಬಳ್ಳದಲ್ಲಿ ಅಳೆದು ಹೊಂಬಟ್ಟಲಿಗೆ ತುಂಬಿಕೊಂಡಳು. ಶುಭ್ರವಾದ ಬಿಳಿಯ ಬಟ್ಟೆಯನ್ನು ಎರಡು ಮಡಿಕೆ ಮಾಡಿ ಬಟ್ಟಲ ಮೇಲೆ ಮುಚ್ಚಿಕೊಂಡು ಸಡಗರದಿಂದ ಶಿವಾಲಯಕ್ಕೆ ಹೋದಳು.

ದೇವಾಲಯದ ಒಳಹೊಕ್ಕು ಕಲ್ಲಿನಾಥನನ್ನು ಕಂಡು ನಮಸ್ಕಾರಮಾಡಿ ಹಾಲಿನ ಬಟ್ಟಲನ್ನು ಮುಂದಿಟ್ಟಳು. ಇಟ್ಟು, "ದೇವಾ, ಹಸಿದೆ; ಹಾಲು ಕುಡಿ" ಎಂದು ನುಡಿದು ಕೊಡಗೂಸು ಕಂಬದ ಮರೆಗೆ ಹೋದಳು. ಸ್ವಲ್ಪ ಹೊತ್ತು ಬಿಟ್ಟು ಬಂದು ನೋಡಿದರೆ ಹಾಲಿನ ಬಟ್ಟಲು ಇದ್ದಂತೆಯೆ ಇತ್ತು. ಕಂಡು ನಡುಗಿ ನೊಂದಳು; ಮರುಗಿದಳು. ಎದೆ ದಡದಡಿಸಿತು; ಉಸಿರು ಬಿಸಿ ಬಿಸಿಯಾಯಿತು; ಕೈ ನಡುಗಿತು; ಬಾಯೊಣಗಿತು; ಗುಡುಗುಡನೆ ಕಂಬನಿಯಿಳಿಯಿತು. ಕಂಬನಿ ಸುರಿಸುತ್ತ ಲಿಂಗವನ್ನು ನೋಡಿ,

"ಏನು ಕಾರಣ ಈ ಹಾಲು ಕುಡಿಯದೆ ನೀನು ಸುಮ್ಮನಿದ್ದೀಯೆ? ಅಯ್ಯೋ! ನನಗೆ ಆತಂಕವುಂಟುಮಾಡುವುದು ಸರಿಯೆ? ಶಂಕರಾ, ನೀನೆ ಹೇಳು. ದೇವಾ, ನಿನಗೇನು ಹಸಿವಾಗಿಲ್ಲವೊ? ಹಾಲು ಕಾದಿಲ್ಲವೊ? ಹೆಚ್ಚು ಕಾದು ಹೊತ್ತಿಬಿಟ್ಟಿದೆಯೊ? ಬಿಸಿಯೇನಾದರೂ ಆರಿಹೋಗಿದೆಯೆ? ಕಮ್ಮಗಿಲ್ಲವೆ? ಇಂಪಾಗಿಲ್ಲವೆ? ನಿನ್ನ ಕಣ್ಣಿಗೆ ಚೆನ್ನಾಗಿ ಕಾಣುವುದಿಲ್ಲವೆ? ಅಥವಾ ಹೊಗೆ ಸುತ್ತಿಕೊಂಡಿದೆಯೆ? ಹೆರರ ಕಣ್ಣೆಂಜಲಾಯಿತೆ? ತುಂಬ

ಬಿಸಿಯಾಗಿ ಬಿಟ್ಟಿದೆಯೆ? ಮಾಸಲಳಿಯಿತೆ? ಏಕೆ ಕುಡಿಯುವುದಿಲ್ಲ ಹೇಳು" ಎಂದಳು.

ಉತ್ತರವಿಲ್ಲದಿರಲು ಮತ್ತೆ, "ನಾನೇನಾದರೂ ಆಸೆಪಟ್ಟು ನೋಡಿದೆನೆ? ಕೆನೆಯನ್ನು ಬೇರೆ ತೆಗೆದಿರಿಸಿ ತಂದೆನೆ? ಮನೆಯಲ್ಲಿ ಹೊತ್ತು ಕಳೆದು ತಡ ಮಾಡಿದೆನೆ? ಮತ್ತೇನಾದರೂ ನೆನೆದೆನೆ? ಏಕೆ ನೀನು ಮಾತಾಡು ವುದಿಲ್ಲ, ಪುರಾರೀ" ಎಂದು ಕೇಳಿದಳು. "ಆರಿಹೋಗಿಬಿಟ್ಟರೆ ಸವಿಯಾಗಿರು ತ್ತದೆಯೆ? ಮನಸ್ಸು ಮಾಡಿ ಬೇಗ ಕುಡಿದು ಬಿಡಯ್ಯ" ಎಂದು ಬೇಡಿದಳು.

"ನಿನಗೆ ಏನು ಬೇಕು, ಹೇಳು. ಈಗಲೆ ಹೋಗಿ ತಂದು ಕೊಡು ತ್ತೇನೆ. ಹೊಸ ಸಕ್ಕರೆ, ಹೊಸ ಜೇನು, ನರುನೆಯ್ಯಿ, ಬಾಳೆಯ ಹಣ್ಣು, ನಾಲಿಗೆ ಬಯಸಿದ್ದು ಏನಿದ್ದರೂ ಹೇಳು; ತಂದುಕೊಡುತ್ತೇನೆ. ಹುರಿಗಡುಬು, ತರಗು, ಚಕ್ಕುಲಿ, ಕರಂಜಿಕಾಯಿ, ಅತಿರಸ, ಚಿಗುಳಿ, ಲಡ್ಡುಗೆ, ಸಕ್ಕರೆ ಫೇಣಿ—ಇವೆಲ್ಲ ಇವೆ ನಮ್ಮ ಮನೆಯಲ್ಲಿ. ನೀನು ಬಯಸಿದರೆ ಹೋಗಿ ಈಗಲೇ ತರುತ್ತೇನೆ. ಹಾಲೊಡನೆ ಆರೋಗಿಸಬೇಕೆಂದರೆ ಮನೆಗೆ ಹೋಗಿ ಓಗರ ತರುತ್ತೇನೆ. 'ಇವಳು ಹಸುಳೆ; ಸುಳ್ಳಾಡುತ್ತಾಳೆ' ಎನ್ನಬೇಡ. ನನ್ನ ಗುಣವನ್ನು ಪರೀಕ್ಷೆ ಮಾಡಿ ನೋಡು" ಎಂದು ಕೇಳಿಕೊಂಡಳು.

ಆಗಲೂ ಶಿವ ಸುಮ್ಮನಿರಲು, "ಅಯ್ಯಾ, ಕೇಳು. ನನ್ನ ಮಾತನ್ನು ಉಪೇಕ್ಷೆ ಮಾಡದೆ ನೀನು ಹಾಲು ಕುಡಿದರೆ ನಿನ್ನನ್ನು ವೀರಭದ್ರನ ತೇರಿಗೆ ಕರೆದುಕೊಂಡು ಹೋಗುತ್ತೇನೆ; ನಮ್ಮ ಗುರುವಿನ ಪರ್ವಕ್ಕೆ ಕರೆದುಕೊಂಡು ಹೋಗುತ್ತೇನೆ. ನಮ್ಮ ತಂದೆ ನಾಳೆ ನನಗೆ ತಂದುಕೊಡುವ ರತ್ನಾಭರಣ ಗಳನ್ನೆಲ್ಲ ನಿನಗೇ ಕೊಟ್ಟುಬಿಡುತ್ತೇನೆ, ಚಂದ್ರಶೇಖರಾ" ಎಂದು ಅಡಿಗೆರಗಿ ಮರುಗಿ ಹಲವು ಬಗೆಯಲ್ಲಿ ಒಡಂಬಡಿಸಿದಳು. ಆದರೂ ಶಿವ ತುಟಿ ಮಿಡುಕದೆ ಸುಮ್ಮನಿದ್ದನು.

ಕೊಡಗೂಸು ನೊಂದು ತಲ್ಲಣಿಸಿದಳು. "ಮಹೇಶ್ವರನು ನುಡಿಯು ವುದಿಲ್ಲ; ಹಾಲು ಕುಡಿಯುವುದಿಲ್ಲ. ಅಯ್ಯೋ! ಏನು ಮಾಡಲಿ?" ಎಂದು ಅತ್ತತ್ತು ಬಾಯಿಬಿಟ್ಟಳು; ಸುಯ್ದಳು; ಬೆಪ್ಪಾಗಿ ನಿಂತಳು; ಬೆಚ್ಚಿ

ಬೆದರಿ ಬಿದ್ದಳು; ಎದ್ದು ದುಃಖದಿಂದ ದಿಕ್ಕುತೋರದೆ ನಿಂತಳು. ಹೀಗೆ ಕೋಟಲೆಪಟ್ಟು, ಸಾಕಾಗಿ ಕಡೆಗೆ ಅತಿ ವಿಷಾದದಿಂದ, "ಹಾಲು ಕುಡಿಯದ ನಿನಗೆ ನನ್ನ ಪ್ರಾಣವನ್ನೆ ಒಪ್ಪಿಸುತ್ತೇನೆ" ಎಂದು ನಿಶ್ಚಯಿಸಿ ಮುಂದಿದ್ದ ಕಲ್ಲು ಕಂಬಕ್ಕೆ ತಲೆಯನ್ನೊಡ್ಡಿ ತಟ್ಟನೆ ಹಾಯ್ದಳು.

"ಮಗಳಿಗೆ ನೋವಾಗುವುದಲ್ಲ" ಎಂದು ಚಂದ್ರಶೇಖರನು ಪ್ರತ್ಯಕ್ಷವಾಗಿ ಬಂದು ಅವಳನ್ನು ಕೈಯಿಂದ ಎತ್ತಿಕೊಂಡನು. ಬಳಿಕ ಆ ಭಕ್ತವತ್ಸಲನು ಅವಳು ತಂದ ಅಣ್ಣೆವಾಲನ್ನು ಸಂತೋಷದಿಂದ ಕುಡಿದನು.

ಆಗ ಕೊಡಗೂಸಿನ ಮುದ್ದುಮುಖದಲ್ಲಿ ಎಳನಗೆಯುಕ್ಕಿತು. ನಲಪಿನಿಂದ ಲಿಂಗವನ್ನು ನೋಡಿದಾಗ ಅವಳ ಕಣ್ಣ ಬೆಳಕಿನಿಂದ ಲಿಂಗಕ್ಕೆ ಅಮೃತಾಭಿಷೇಕ ಮಾಡಿದಂತಾಯಿತು. ಅವಳು ಅನುರಾಗ ತುಂಬಿದ ವಿನೋದದಿಂದ, "ನಾನು ಹಸುಳೆಯೆಂದು ಹಾಲು ಕುಡಿಯದೆ ನನಗೆ ಸಂಕಟವುಂಟು ಮಾಡಿ ಕಾಡಿದೆಯಲ್ಲವೆ?" ಎನ್ನಲು ನಾಗಭೂಷಣನು ನಲಿದು ನಕ್ಕನು.

"ಅಪ್ಪ ಬರಲಿ. ಇದನ್ನೆಲ್ಲ ಹೇಳುತ್ತೇನೆ. ಅಯ್ಯಾ, ಮರೆಯಬೇಡ. ಆಮೇಲೆ ನನಗೂ ನಿನಗೂ ಸಂವಾದವುಂಟು" ಎಂದು ನುಡಿದು ಅಡ್ಡಬಿದ್ದು ನಗುನಗುತ್ತ ಕೊಡಗೂಸು ಮನೆಗೆ ಬಂದಳು. ಮಹೇಶ್ವರನು, "ಬಾಲೆಯ ಮೃದು ನುಡಿ ಬಟ್ಟಲ ಹಾಲಿಗಿಂತ ಸಿವಿಗಿನಿದಾಗಿತ್ತು. ಅದರಿಂದ ಮೊದಲು ಹಾಲು ಕುಡಿಯದೆ ಅವಳ ಮುದ್ದು ಮಾತುಗಳನ್ನು ಕೇಳಿ ಆನಂದಿಸುತ್ತಿದ್ದೆ" ಎಂದು ಉಮೆಗೆ ಹೇಳಿದನು.

ಆಮೇಲೆ ಆ ಬಾಲೆ ದಿನದಿನವೂ ಭಕ್ತಿಯಿಂದ ಹಾಲು ತಂದು ಶಿವನಿಗೆರೆದು ಕುಡಿಸಿ ಮನೆಗೆ ಹೋಗುತ್ತಿದ್ದಳು.

ಕೆಲವು ದಿನ ಕಳೆಯಿತು. ಒಂದು ದಿನ ಕೊಡಗೂಸು ಶಿವನಿಗೆ ಹಾಲೆರೆದು ಮನೆಗೆ ಬರುತ್ತಿದ್ದಳು. ಬೇರೂರಿಗೆ ಹೋಗಿದ್ದ ಶಿವದೇವನೂ ಅಂದು ಊರಿಗೆ ಹಿಂದಿರುಗಿ ಅದೇ ದಾರಿಯಲ್ಲಿ ಬರುತ್ತಿದ್ದವನು ಮಗಳ ಹತ್ತಿರ ಬಂದು ಅವಳ ಕೈಯ ಬಟ್ಟಲು ಬರಿದಾಗಿದ್ದದ್ದನ್ನು ಕಂಡನು. ಕಂಡು ಕೆರಳಿದನು. ಮಗಳನ್ನು ಕುರಿತು,

"ಎಲೆ ತಬ್ಬಲೀ, ನಿನ್ನ ಕೈಯಲ್ಲಿ ಬರಿಯ ಬಟ್ಟಲಿದೆಯಲ್ಲ! ಹಾಲು

ನೆಲಕ್ಕೆ ಚೆಲ್ಲಿತೋ ? ನೀನೆ ಕುಡಿದೆಯೊ ? ಇಲ್ಲ, ನಿನ್ನೊಡನಾಡಿಗಳಿಗೆ ಎರೆದು ಬಿಟ್ಟೆಯೊ ? ಹೇಳು" ಎಂದು ಆಗ್ರಹಿಸಿ ನುಡಿದನು.

ತಂದೆ ಕೋಪಿಸಿ ನುಡಿಯುತ್ತಿದ್ದರೂ ಹುಡುಗಿ ಹೆದರದೆ ಧೈರ್ಯವಾಗಿ ನಿಂತಳು. "ಅಪ್ಪಾ, ನೀನು ಹೇಳಿದ್ದಂತೆ ಬಟ್ಟಲು ಹಾಲನ್ನು ತೆಗೆದು ಕೊಂಡು ಹೋಗಿ ಮುಂದಿಟ್ಟೆ. ಕುಡಿದ ತ್ರ್ಯಂಬಕ. ಅದರಿಂದ ಬರಿಯ ಬಟ್ಟಲನ್ನು ತರುತ್ತಿದ್ದೇನೆ. ದಿನದಿನವೂ ಹೀಗೆಯೆ ಶಿವ ಹಾಲು ಕುಡಿಯು ತ್ತಾನೆ. ಸುಳ್ಳಲ್ಲ ; ನಿಜ" ಎಂದಳು. ಅದನ್ನು ಕೇಳಿ ಆ ತಂದೆ, "ಹಾಲನ್ನು ಶಿವ ಕುಡಿಯುತ್ತಾನೆಯೆ ? ಸುಳ್ಳು, ಸುಳ್ಳು" ಎಂದನು. "ಅತಿ ವೃದ್ಧ ರಾದ ಭಕ್ತರು ಸದಾಕಾಲವೂ ಪ್ರಾರ್ಥಿಸಿದರೂ ಶಿವನು ಆರೋಗಿಸುವುದು ದುರ್ಲಭ. ಏನೂ ಅರಿಯದ ಬುದ್ಧಿಯಿಲ್ಲದ ಹುಡುಗಿಯ ಮಾತುಕೇಳಿ ಹಾಲು ಕುಡಿಯುತ್ತಾನೆಯೆ ?" ಎಂದು ತನ್ನ ಮನಸ್ಸಿನಲ್ಲಿ ಆಲೋಚಿಸಿ ದನು. "ಶಿವನಿಗೆ ಇವಳು ಹಾಲು ಕೊಡುವುದನ್ನು ನಾಳೆ ನೋಡುತ್ತೇನೆ" ಎಂದು ನಿರ್ಧರಿಸಿ ಮಗಳೊಡನೆ ಮನೆಗೆ ಬಂದನು.

ಮರುದಿನ ಬೆಳಗ್ಗೆ ಎಂದಿನಂತೆ ಹೊಂಬಟ್ಟಲಿನಲ್ಲಿ ಹಾಲು ತುಂಬಿ ಕೊಂಡು ಹೊರಟು ಮಗಳೊಡನೆ ಶಿವದೇವನೂ ದೇವಾಲಯಕ್ಕೆ ಹೋಗಿ ಶಿವನೆದುರಿಗೆ ನಿಂತು ನೋಡುತ್ತಿದ್ದನು. ಕೊಡಗೂಸು ಮೃಡನಿಗೆರಗಿ ಹಾಲನ್ನು ಮುಂದಿಟ್ಟು ಕೈಮುಗಿದು ಆರೋಗಿಸೆಂದು ಬಿನ್ನಹ ಮಾಡಿದಳು. ಹರನು ಆ ಭಕ್ತೆಯ ಮಹಿಮೆಯನ್ನು ಧರೆಗೆಲ್ಲ ತೋರಬೇಕೆಂದು ಹಾಲು ಕುಡಿ ಯದೆ ಸುಮ್ಮನಿದ್ದನು. ಆಗ ತರಳೆ ಅಂಜಿ ನಡುಗಿದಳು.

ಅದನ್ನು ಕಂಡು ತಂದೆ ಕೋಪಗೊಂಡು, "ನೀನೇ ಕುಡಿದು ಹಾಲನ್ನು ಶಿವ ಕುಡಿದನೆಂದು ಹುಸಿ ನುಡಿದೆಯಲ್ಲ. ಪಾತಕೀ, ನಿನ್ನನ್ನು ಕಡಿದಿಕ್ಕದೆ ಬಿಡುತ್ತೇನೆಯೇ ?" ಎಂದು ಉಗ್ರವಾಗಿ ನುಡಿಯುತ್ತ ಹೊಡೆಯಲು ಮೇಲೆ ನುಗ್ಗಿದನು.

ಹುಡುಗಿಗೆ ಮಹಾಭಯವುಂಟಾಯಿತು. ಗಡಗಡನೆ ನಡುಗುತ್ತ, "ಹಾ, ಮಹೇಶ್ವರಾ ! ಹಾ, ಮದೀಶ್ವರಾ ! ನೀನೇ ಸದ್ಗತಿ. ಕಾಪಾಡು" ಎಂದು ಚೀರಿದಳು. ಆಗ ಸೋಮಶೇಖರನು, "ಅಂಜದಿರು ಮಗಳೇ !"

ಎಂದು ಬೇಗ ಅಭಯಕೊಟ್ಟನು. ಕೃಪಾನಿಧಿಯಾದ ಶಂಕರನು ಮನಸ್ಸಿಗೊಪ್ಪಿ ಸೊಗಸುವ ಆ ಅಮೃತರಸವನ್ನು ಕುಡಿದನು.

ಬಳಿಕ ಆ ಕೊಡಗೂಸನ್ನು ಕೃಪಾಕಟಾಕ್ಷದಿಂದ ನೋಡಿ, ಕೈ ನೀಡಿ ಸೆಳೆದು ಬಿಗಿಯಪ್ಪಿಕೊಂಡು, ಗೌರೀಕಾಂತನು ಅವಳನ್ನು ತನ್ನೊಡಲಿನಲ್ಲಿ ಜೋಕೆಯಿಂದ ಇರಿಸಿಕೊಂಡನು. ಶಿವಲಿಂಗದಲ್ಲಿ ಒಳಹೊಗುತ್ತಿರುವ ಮಗಳನ್ನು ಕಂಡು ತಂದೆ, "ಎಲೆಲೇ, ಹೋಗಬೇಡ" ಎಂದು ಜಂಡಿಕೆ ಹಿಡಿದೆಳೆದನು. ಜಡೆ ಮಾತ್ರ ಹೊರಗುಳಿಯಿತು; ಲೋಕವೆಲ್ಲ ಮೆಚ್ಚಿ ಕೊಂಡಾಡುವಂತೆ ಕೊಡಗೂಸು ಲಿಂಗದೊಳಹೊಕ್ಕಳು. ಪಾಪಹರನಾದ ಪರಮೇಶ್ವರನು ಪ್ರೀತಿಯಿಂದ ತನಗೆ ಹಾಲು ಕೊಟ್ಟ ಮುಗ್ಧ ಭಕ್ತೆಗೆ ಸೊಗಸಾದ ಅಮೃತವನ್ನು ಕೊಟ್ಟು ಕಾಪಾಡಿದನು

## ಟಿಪ್ಪಣಿ

ಈ ಕಥೆ ವೃಷಭೇಂದ್ರ ವಿಜಯವೆಂಬ ಕಾವ್ಯದಿಂದ ಆಯ್ದುಕೊಂಡದ್ದು. ವೃಷಭೇಂದ್ರ ವಿಜಯದಲ್ಲಿ ಬಸವಣ್ಣನವರ ಚರಿತ್ರೆಯನ್ನು ನಿರೂಪಿಸಿದೆ. ಹರಿಹರನ 'ಬಸವರಾಜ ದೇವರ ರಗಳೆ' ಯಲ್ಲಿನ ಕಥೆಗೂ ಈ ಗ್ರಂಥದಲ್ಲಿನ ಕಥೆಗೂ ಹಲವು ವ್ಯತ್ಯಾಸಗಳಿವೆ. ಬಸವಣ್ಣನವರ ಜೀವನಕ್ಕೆ ಸಂಬಂಧಿಸಿದ ಇನ್ನೂ ಕೆಲವು ಭಕ್ತರ ಕಥೆಗಳೂ ಇಲ್ಲಿ ದೊರೆಯುತ್ತವೆ. ಕೊಡಗೂಸಿನ ಕಥೆಯನ್ನು ಬಸವಣ್ಣನವರು ಹೇಳಿದಂತೆ ವರ್ಣಿಸಿದೆ.

ಇದನ್ನು ಬರೆದವನು ಷಡಕ್ಷರದೇವ. ಇವನು ಯಳಂದೂರು ಮಠಕ್ಕೆ ಸ್ವಾಮಿಯಾಗಿದ್ದನು. ಇವನ ಕವಿತೆ ಅಲಂಕಾರ ಚಮತ್ಕಾರ ಪೂರ್ಣವಾಗಿ ಪಂಡಿತರಂಜಕವಾಗಿದೆ.

ರಾಜಶೇಖರವಿಲಾಸ, ವೃಷಭೇಂದ್ರ ವಿಜಯ, ಶಬರಶಂಕರವಿಲಾಸ—ಎಂಬವು ಇವನ ಕೃತಿಗಳು. ಇವೆಲ್ಲ ಪ್ರೌಢಶೈಲಿಯ ಚಂಪೂ ಕಾವ್ಯಗಳು; ಹಳಗನ್ನಡದಲ್ಲಿ ರಚಿತವಾಗಿವೆ.

ಇವನ ಕಾಲ ಕ್ರಿ. ಶ. ೧೭ನೆಯ ಶತಮಾನದ ಉತ್ತರಾರ್ಧ.

---:---

## ಅರ್ಥಕೋಶ

ಅಗ್ಗವಣಿ = ಅಭಿಷೇಕಕ್ಕೆ ನೀರು
ಅಚ್ಚವಾಲು = ಶುದ್ಧವಾದ ಹಾಲು
ಉಪ್ಪವಡಿಸು = (ನಿದ್ದೆಯಿಂದ) ಏಳು
ಉಗ್ಗಡಿಸು = ಪರಾಕು ಹೇಳು, ಹೊಗಳು
ಒಳ್ಪು = ಒಳ್ಳೆಯತನ
ಓಗರ = ಅನ್ನ
ಓಜ = ಉಪಾಧ್ಯಾಯ
ಓಜೆ = ಕ್ರಮ
ಕಡುಹು = ಪ್ರತಾಪ, ಪರಾಕ್ರಮ
ಕರಡಿಗೆ, ಕರಂಡಕ = ಪೆಟ್ಟಿಗೆ
ಕೈವಾರಿ = ಹೊಗಳುಭಟ್ಟ
ಗಂಡನಾಗು = ಶೂರನಾಗು
ಗವಲು = ದುರ್ವಾಸನೆ, ಕೆಟ್ಟ ನಾತ
ಗೂಳೆಯ = ಪೂರ್ತಿಯಾಗಿ ಸ್ಥಳ ಬಿಟ್ಟು ಹೋಗುವುದು
ಚಿಗಸು = ಎಲ್ಲರನ್ನೂ ಕಳಿಸಿಬಿಡು
ಚರಿಗೆ = ಭಿಕ್ಷಾಟನೆ
ಚರ್ಮ = ಗುರಾಣಿ
ತಳಾರ = ಕಳ್ಳರನ್ನು ಹಿಡಿದು ಶಿಕ್ಷಿಸುವ ದೊಡ್ಡ ಅಧಿಕಾರಿ
ನಚ್ಚು = ನಂಟತನ
ನರುನೆಯ್ಯ = ಗಮಗಮಿಸುವ ತುಪ್ಪ
ನೇಸರು = ಸೂರ್ಯ
ಪಡೆವಳ್ಗ = ಸೇನಾಪತಿ
ಪಾವುಡ = ಕಾಣಿಕೆಯಾಗಿ ಕಳಿಸುವ ಬಟ್ಟೆ
ಪೂಸು = ಬಳಿದುಕೊ
ಬರಿಯ = ಏನೂ ಇಲ್ಲದವನು, ದರಿದ್ರ
ಬೋನಸ = ಅಡಿಗೆ
ಬಿನುಗು = ಅಲ್ಪ, ಕೀಳು
ಸರಳು = ಅಂಬು, ಬಾಣ
ಸವಣ = ಶ್ರಮಣ; ಜೈನ ಸಂನ್ಯಾಸಿ
ಸವಣ್ಮರುಳುಗಳು = ಸವಣರ ಹುಚ್ಚು ಹಿಡಿದವರು
ಸೀಸಕ = ತಲೆಗಾಪು, ಲೋಹದ ಕುಲಾವಿ
ಸೇಸೆಯಿಕ್ಕು = ಅಕ್ಷತೆಯೆರಚು
ಸೋವು = ಅಟ್ಟಿತರು
ಹರದ = ವರ್ತಕ, ವ್ಯಾಪಾರಿ
ಹರಿವೊಂಟೆ = ವೇಗದಿಂದ ಓಡುವ ಒಂಟೆ
ಹಿರಿಮೆ = ದೊಡ್ಡತನ, ಹೆಚ್ಚುಗಾರಿಕೆ
ಹೊಲಬು = ದಾರಿ, ಸುಳಿವು
ಪೊಳಲು = ಪಟ್ಟಣ.

## ಟಿಪ್ಪಣಿಗಳು

**ಅಚ್ಯುತೇಂದ್ರ** :—ಜೈನರ ನಂಬಿಕೆಯ ಪ್ರಕಾರ ಸ್ವರ್ಗ ಒಂದಲ್ಲ ಹಲವು. ಅವುಗಳಲ್ಲಿ 'ಅಚ್ಯುತಕಲ್ಪ' ಎಂಬುದೊಂದು. ಅಲ್ಲಿನ ಇಂದ್ರನೇ ಅಚ್ಯುತೇಂದ್ರ.

**ಸಮ್ಯಕ್ತ್ವ** :—ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್‌ಚಾರಿತ್ರ - ಈ ಮೂರೂ ಜೈನಧರ್ಮದ ಮೂಲ ತತ್ವಗಳು. ಇವಕ್ಕೆ ಕ್ರಮವಾಗಿ ಚೆನ್ನಾಗಿ ನೋಡುವುದು, ಚೆನ್ನಾಗಿ ತಿಳಿಯುವುದು, ಚೆನ್ನಾಗಿ ನಡೆಯುವುದು - ಎಂದು ಅರ್ಥ. ಜೈನಧರ್ಮವನ್ನು ನಂಬಿ ತಿಳಿದು ನಡೆಯುವುದೆಂದು ಇವುಗಳ ತಾತ್ಪರ್ಯ. ಇವೇ ರತ್ನತ್ರಯಗಳು. ಸಮ್ಯಕ್ತ್ವವೆಂದರೂ ಇವೇ. ಸಮ್ಯಗ್ದರ್ಶನ (ಎಂದರೆ ಜೈನಧರ್ಮದಲ್ಲಿ ನಂಬಿಕೆ) ಉಳ್ಳವನು ಸಮ್ಯಗ್‌ದೃಷ್ಟಿ, ಇಲ್ಲದವನು ಮಿಥ್ಯಾದೃಷ್ಟಿ.

**ಪಂಚಾಶ್ಚರ್ಯಗಳು** :— ಐದು ಆಶ್ಚರ್ಯಗಳು: ೧ ದೇವದುಂದುಭಿ ಮೊಳಗುವುದು ೨ ಹೂವಿನ ಮಳೆ ಸುರಿಯುವುದು ೩ ಚಿನ್ನದ ಮಳೆ ಸುರಿಯುವುದು ೪ ದೇವತೆಗಳು ಪ್ರಶಂಸೆಮಾಡುವುದು ೫ ತಂಗಾಳಿ ಬೀಸುವುದು.

**ಪಂಚ ನಮಸ್ಕಾರ ಮಂತ್ರ** :— ಅರ್ಹಂತರು, ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಸರ್ವಸಾಧುಗಳು - ಎಂಬ ಈ ಐದು ಬಗೆಯ ಮಹಾಪುರುಷರನ್ನು ಜೈನರು ದಿನದಿನವೂ ನಮಸ್ಕರಿಸುತ್ತಾರೆ. ಅವರನ್ನು ನಮಸ್ಕರಿಸುವಾಗ, 'ಅರ್ಹಂತರಿಗೆ ನಮಸ್ಕಾರ, ಸಿದ್ಧರಿಗೆ ನಮಸ್ಕಾರ' ಎಂದು ಮುಂತಾಗಿ ಹೇಳುವ ನುಡಿಗಳೇ ಪಂಚ ನಮಸ್ಕಾರ ಮಂತ್ರ.

# ನೋಡಿದರೆ ಬಿಡದೆ ಓದುವ ಪುಸ್ತಕಗಳು

| | | ರೂ. | ಅ. | ಪೈ. |
|---|---|---|---|---|
| ೧. | ಅನುಭವಾಮೃತ— ಚಿದಂಬರಯ್ಯ | ೧ | ೮ | ೦ |
| ೨. | ಆತ್ಮಶಕ್ತಿಯ ತೇಜಸ್ಸು ,, | ೧ | ೧ | ೨ |
| ೩. | ಭಗವದ್ಗೀತಾಸಾರ ವಿಚಾರ ,, | ೧ | ೮ | ೦ |
| ೪. | ತಾರಾನಾಥ ತರ್ಕವಾಚಸ್ಪತಿ ,, | ೦ | ೧೦ | ೦ |
| ೫. | ರಾಮಾಯಣದ ಮಹಾಪುರುಷರು ದೇವುಡು | ೧ | ೨ | ೦ |
| ೬. | ದೇಶಾಂತರದ ಕಥೆಗಳು ,, | ೦ | ೧೨ | ೦ |
| ೭. | ಬಿಂದುವಾಸಿನಿಯ ಮಗ—ಜ್ಯೋತಿ | ೦ | ೮ | ೦ |
| ೮. | ಪುಷ್ಪಮಾಲೆ—ಶ್ರೀ ಸ್ವಾಮಿ | ೧ | ೪ | ೦ |
| ೯. | ಭಾಗ್ಯಲಕ್ಷ್ಮಿ—ಎಂ. ವಿ. ಸೀತಾರಾಮಯ್ಯ | ೦ | ೧೨ | ೦ |
| ೧೦. | ಜೀವಜ್ಯೋತಿಗಳು— ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್ | ೧ | [illegible] | [illegible] |
| ೧೧. | ಅಕ್ಬರ್ ಬಾದಶಹ—ತಾತಾಚಾರ್ಯ ಶರ್ಮ | ೧ | ೦ | ೦ |
| ೧೨. | ದೀನಬಂಧು—ಸಿ. ಎಫ್. ಆಂಡ್ರೂಸ್ ಕೆ. ದೊರೆಸ್ವಾಮಿ | ೧ | ೯ | ೦ |
| ೧೩. | ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ— ಅ. ನ. ಕೃಷ್ಣರಾಯರು | ೨ | ೦ | [illegible] |
| ೧೪. | ರಾಮಚಂದ್ರ—ಎಂ. ಕೃಷ್ಣಸ್ವಾಮಿ | ೯ | ೧೨ | ೬ |
| ೧೫. | ದ್ರವ್ಯಪೀಠ—ಬಿ. ಆರ್. ಕೃಷ್ಣಮೂರ್ತಿ | ೮ | [illegible] | ೦ |
| ೧೬. | ಸ್ವಾಮಿ ವಿವೇಕಾನಂದ—ಅ. ನ. ಕೃಷ್ಣರಾಯರು | ೧ | ೦ | ೦ |
| ೧೭. | ಉದಯರಾಗ—ಅ.ನ. ಕೃಷ್ಣರಾಯರು | ೧ | ೦ | ೦ |
| ೧೮. | ಮಂಗಳಸೂತ್ರ—ಅ. ನ. ಕೃಷ್ಣರಾಯರು | ೨ | ೦ | ೦ |
| ೧೯. | ಕಾವ್ಯಾಲಾಪ—ಯಂ. ವಿ. ಸೀತಾರಾಮಯ್ಯ | ೦ | ೨ | ೦ |
| ೨೦. | ಶ್ರೀ ವಿದ್ಯಾರಣ್ಯರು—ಒ. ಎನ್. ಲಿಂಗಣ್ಣಯ್ಯ | ೧ | ೮ | ೦ |
| ೨೧. | ರಾಜಾರಾಮಮೋಹನರಾಯ್ ಡಿ. ವಿ. ಶೇಷಗಿರಿರಾವ್ | ೧ | ೮ | ೦ |
| ೨೨. | ಮಾರ್ಗದರ್ಶಕ—ಎಂ. ವಿ. ಸೀತಾರಾಮಯ್ಯ | ೧ | ೪ | ೦ |
| ೨೩. | ಯೋಗರಹಸ್ಯ—ಕ. ಶಿವರಾಮದಾಸರು | | | |